॥ ಶ್ರೀ ॥

ಮಹಾಕವಿ ದಿಙ್ನಾಗವಿರಚಿತ

# ಕುಂದಮಾಲೆ

(ಎರಡನೆಯ ಮುದ್ರಣ)



ಮೊಳೆಯೂರು ಶಂಕರನಾರಾಯಣ ಭಟ್ಟ, ವಿದ್ವಾನ್
ಗವರ್ನಮೆಂಟ್ ಕಾಲೇಜು, ಮಂಗಳೂರು.

1954

# ಬಿನ್ನಹ

ಉತ್ತಮಸಾಹಿತ್ಯವು ದೇಶದ ವೈಭವಸೂಚಕವಾಗಿ ಸರ್ವಾದರಣೀಯವೂ ಪೂಜ್ಯತಮವೂ ಆಗಿರುವುದು. ನಿರಂತರಶ್ರದ್ಧಾಭಕ್ತಿರೂಪವಾದ ಕಷ್ಟತಪಸ್ಸಿನಿಂದಲೇ ಅದರ ಸೃಷ್ಟಿಯಾಗಬೇಕು. ಅದು ಪುಣ್ಯವಂತರಿಂದಲೇ ಸಾಧ್ಯವು. ಅದನ್ನು ಗಳಿಸಿಕೊಂಡ ಮಹಾತ್ಮರು ಕಾಲಕಲ್ಪದಲ್ಲಿ ಪ್ರಜಾಕೋಟಿಯೊಳಗೆ ಎಲ್ಲಿಯೋ ವಿರಳವಾಗಿ ಒಬ್ಬಿಬ್ಬರು ಮಾತ್ರ ಉದಯಿಸುವರೆಂಬುದನ್ನು ನಾವು ಸಾಹಿತ್ಯಚರಿತ್ರೆಯ ಮೂಲಕ ತಿಳಿದುಕೊಳ್ಳುವೆವು. ಅವರನ್ನೇ ಕವಿಪುಂಗವರೆಂದು ಕೊಂಡಾಡುವೆವು. ಅಂತಹ ಪುಣ್ಯಪುರುಷರ ಸೃಷ್ಟಿಯು ವಿಶೇಷವಾಗಿ ನಡೆಯಿತೆಂದರೆ ಇದೇ ಅಮರಲೋಕವಾಗುವುದರಲ್ಲಿ ಸಂಶಯವಿಲ್ಲ. ಮಹಾಕವಿದಿಙ್ನಾಗನೂ ಅವರ ಸಾಲಿಗೆ ಸೇರಿದವನು. ಅವನ ಗ್ರಂಥವು ಭರತಖಂಡದ ಸಂಸ್ಕೃತಿಯ ಹೆಗ್ಗುರುತಾಗಿ ಅಮರಭಾಷೆಯಲ್ಲಿ ಬೆಳಗುತ್ತಿರುವುದು.

ಕುಂದಮಾಲೆಯೆಂದು ಕರೆಯಲ್ಪಡುವ ಆ ರೂಪಕರತ್ನವು ಸತೀಧರ್ಮ, ಏಕಪತ್ನೀವ್ರತ, ಗುರುಹಿರಿಯರ ಸೇವೆ, ಕುಲಪತಿಗಳ ಸ್ಥಾನಮಾನ, ಗುರುಕುಲವಾಸ, ಪಶ್ಚಾತ್ತಾಪ ಸಂಶುದ್ಧಿ ಇವೇ ಮೊದಲಾದ ಉಚ್ಚತಮಧ್ಯೇಯಗಳನ್ನು ಮುಂದಿಟ್ಟುಕೊಂಡು ವಿರಚಿತವಾಗಿರುವುದು. ಉತ್ತಮಪಾತ್ರಕಲ್ಪನೆಗಳಿಂದಲೂ, ಮನಸ್ಸಿನಲ್ಲಿ ಶಾಶ್ವತವಾಗಿ ನೆಲಸತಕ್ಕ ಸನ್ನಿವೇಶಗಳಿಂದಲೂ ಮೆರೆಯುತ್ತ ಸರಳಸುಂದರವಾಗಿರುವುದರಿಂದ ಇದು ಸಮಾಜದಲ್ಲಿ ಸತ್ಪರಿಣಾಮವನ್ನು ಉಂಟುಮಾಡುವುದರಲ್ಲಿ ಸಂಶಯವಿಲ್ಲ. ಇದರ ವಸ್ತುಗತಿಯಲ್ಲಿ ತೊಡಕಿಲ್ಲ; ಅಮಾನುಷಭಾವನೆಯ ಸಂಕಷ್ಟವಿಲ್ಲ; ಕವಿತಾಪ್ರೌಢಿಮೆಯ ಸೂಡಿಲ್ಲ; ಮೃದುಮಧುರನಾದದಂತೆ ಆಹ್ಲಾದವನ್ನು ಕಲ್ಪಿಸುತ್ತ ಪ್ರೇಕ್ಷಕರ ಹಾಗೂ ವಾಚಕರ ಸಹಸಂತಾಪವನ್ನು ಸ್ವೀಕರಿಸಿಕೊಳ್ಳುತ್ತ ಗುಣಗಣಗಳಂತಿರುವ ಆರು ಅಂಕಗಳಿಂದ ಸಾಗುತ್ತಿರುವ ಬೆಡಗನ್ನು ಹೇಳಿತೀರದು. ಕವಿಶ್ರೇಷ್ಠನಾದ ದಿಙ್ನಾಗನು ಪ್ರಪಂಚದ ಹಿತಸಾಧನೆಯ ಸಲುವಾಗಿಯೇ ಅಮರಜ್ಯೋತಿಯನ್ನು ಬೀರುವ ಪ್ರಭಾವವುಳ್ಳ ಗ್ರಂಥರತ್ನವನ್ನು ನಿರ್ಮಿಸಿರುವನು. ಅದರ ಜ್ಯೋತಿಯನ್ನು ನಮ್ಮಲ್ಲಿಗೂ ಬರಮಾಡಿ

ಕೊಂಡರೆ, ಅದಕ್ಕಾಗಿ ನಾವು ಶ್ರಮಿಸಿದರೆ, ಅದರಿಂದ ನಮಗೇನೂ ಕೊರತೆ ಯಾಗಲಾರದು. ಮಾತ್ರವಲ್ಲ; ಆತನ ಆತ್ಮವೂ ತೃಪ್ತಿಹೊಂದುವುದು.

ನಮ್ಮ ಸಾಹಿತ್ಯ ಕ್ಷೇತ್ರವು ಅಂಗೋಪಾಂಗಗಳಿಂದ ಕೂಡಿ ಸರ್ವ ಸಮೃದ್ಧವಾಗಿರುವುದಾದರೂ ಅದು ಇನ್ನೂ ಚಿಗುರೊಡೆದು ಹೂಬಿಟ್ಟು ಹುಲು ಸಾಗಿ ಫಲಿಸಿ ನಾಡಿನ ಆದ್ಯಂತವೂ ಸುಗ್ಗಿಯ ವೈಭವವನ್ನು ಉಣ್ಣಿಸಬೇಕು; ನಮ್ಮೆಲ್ಲರನ್ನೂ ಸಂತೋಷದಿಂದ ನಲಿದಾಡಿಸಬೇಕು; ನಮ್ಮಿಂದ ಉದಯ ಗೀತೆಯನ್ನು ಹಾಡಿಸಬೇಕು; ಎಂದರೆ ನಿರಂತರವೂ ಅವ್ಯಾಹತವಾಗಿ ಉತ್ತಮ ಸಾಹಿತ್ಯವು ಸೃಷ್ಟಿಯಾಗಬೇಕು. ಭಾಷೆಗೆ ಪ್ರಾಧಾನ್ಯವು ಬರುತ್ತಿರುವ ಈ ಕಾಲದಲ್ಲಂತೂ ಅದರ ಅಗತ್ಯವನ್ನು ಪ್ರತ್ಯೇಕ ಹೇಳಬೇಕಾಗಿಲ್ಲ.

ಇಂತಹ ಉದ್ಯಮಗಳಲ್ಲಿ ಸಹಕರಿಸಿ ಪ್ರೋತ್ಸಾಹಿಸಿದ ಸಹೃದಯರಲ್ಲಿ ವಿನೀತನಾಗಿ ಕೃತಜ್ಞತೆಯನ್ನು ನಿವೇದಿಸುತ್ತ, ಉತ್ಸಾಹವು ಪ್ರೇರೇಪಿಸುತ್ತಿರು ವಂತೆ ಶಕ್ತಿಗನುಸಾರವಾಗಿ ಸಾಹಿತ್ಯಸೇವೆಯೆಂಬ ವಿಶ್ವಾಸದಿಂದ ಮುಂದು ವರಿಯುತ್ತ ಕನ್ನಡಿಗರಿಗೆ ಕುಂದಮಾಲೆಯನ್ನು ಸಮರ್ಪಿಸುವೆನೆಂಬ ಹಂಬಲ ದಿಂದ ಹೊರಟಿರಲು ಇದರ ಎರಡನೆಯ ಮುದ್ರಣದ ಆವಶ್ಯಕತೆಯನ್ನು ಒದಗಿಸಿಕೊಟ್ಟ ಸಹೃದಯರಿಗೆ ನಾನು ಋಣಿಯಾಗಿರುವೆನು. ಇದನ್ನು ಸಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟ ವಿಜಯ ಪ್ರಿಂಟರ್ಸ್ ಎಂಡ್ ಪಬ್ಲಿಷರ್ಸ್ ಲಿಮಿಟೆಡ್, ಮಂಗಳೂರು ಈ ಸಂಸ್ಥೆಯವರಿಗೆ ನನ್ನ ಧನ್ಯ ವಾದಗಳು.

ಇಂತು ಬಿನ್ನಯಿಸುವ ಸಜ್ಜನವಿಧೇಯ,

**ಮೊಳೆಯಾರು ಶಂಕರನಾರಾಯಣ ಭಟ್ಟ.**



# "ಸಂಕ್ಷಿಪ್ತಕವಿಕಾವ್ಯಾದಿವಿಚಾರ"

ಶ್ರೀಮದ್ರಾಮಾಯಣದ ಉತ್ತರಕಾಂಡದ ಕಥೆಯನ್ನವಲಂಬಿಸಿ ಈ ರೂಪಕದ ಮೂಲವು ಸಂಸ್ಕೃತ ಭಾಷೆಯಲ್ಲಿ ವಿರಚಿತವಾಗಿರುವುದು. ಅಪವಾದಭಯದಿಂದ ಪರಿತ್ಯಕ್ತಳಾದ ಸೀತೆಯು ರಚಿಸಿದ್ದ ಕುಂದಮಾಲೆಯ ಗುರುತನ್ನು ರಾಮನು ಕಂಡುಹಿಡಿದು ತನ್ನ ಪತ್ನಿಯು ಬದುಕಿರುವಳೆಂದು ತಿಳಿದುಕೊಂಡ ಹಾಗೆ ಕವಿಯು ಕಥಾಭಾಗವನ್ನು ನೂತನವಾಗಿ ಕಲ್ಪಿಸಿ "ಕುಂದಮಾಲೆ"ಯೆಂಬ ಹೆಸರನ್ನಿತ್ತಿರುವನು. ಈ ಕಥಾಭಾಗವನ್ನೇ ಅವಲಂಬಿಸಿ ಮಹಾಕವಿಯಾದ ಭವಭೂತಿಯು "ಉತ್ತರರಾಮಚರಿತ್ರೆ"ಯೆಂಬ ನಾಟಕವನ್ನು ಬರೆದಿರುವನು.

ಕುಂದಮಾಲೆಯನ್ನು ಬೌದ್ಧನೈಯಾಯಿಕರೊಳಗೆ ಪ್ರಸಿದ್ಧನಾದ ಅರಾರಾಲಪುರದ ದಿಙ್ನಾಗನೆಂಬ ಕವಿಯು ಬರೆದಂತೆ ಮೈಸೂರು ಗವರ್ನಮೆಂಟ್ ಮೇನ್ಯುಸ್ಕ್ರಿಪ್ಟ್ಸ ಲೈಬ್ರೆರಿಯ ಹಸ್ತಪ್ರತಿಗಳ ಪ್ರಸ್ತಾವನಾಭಾಗದಿಂದ ತಿಳಿದುಬರುತ್ತದೆ. ದಿಙ್ನಾಗನು ಕವಿಚಕ್ರವರ್ತಿಯಾದ ಕಾಳಿದಾಸನ ಸಮಕಾಲಿಕನು; ತಂಜಾವೂರು ಅರಮನೆಯ ಸರಸ್ವತೀಭಂಡಾರದ ಪ್ರತಿಗಳಲ್ಲಿಯ ಪ್ರಸ್ತಾವನೆಯಲ್ಲಿ ಕವಿಯ ಹೆಸರೇ ಕಂಡುಬರುವುದಿಲ್ಲವೆಂದೂ, ಗ್ರಂಥಾಂತ್ಯದಲ್ಲಿ "ಅನೂಪುರಾದ"ದ "ಧೀರನಾಗ"ನು ಈ ನಾಟಕದ ಕರ್ತೃವೆಂದು ಲೇಖಕನಿಂದ ಹೇಳಲಾಗಿದೆಯೆಂದೂ, ಸಾಲದುದಕ್ಕೆ ಮೈಸೂರು ಪ್ರತಿಗಳಲ್ಲಿ ಕೂಡ "ದಧೀಚಿನಾಗ" ಎಂಬ ಹೆಸರನ್ನು ಹೊಡೆದು "ದಿಙ್ನಾಗ"ನೆಂಬ ಹೆಸರು ತಿದ್ದಿ ಬರೆಯಲಾಗಿದೆಯೆಂದೂ ತಿಳಿಯಬರುತ್ತಿದೆ. ಈ ಮೂರು ಹೆಸರುಗಳೊಳಗೆ ಕವಿಯ ಹೆಸರು ಯಾವುದೇ ಆಗಿದ್ದರೂ ಅವು ಮೂರೂ ಬೌದ್ಧನಾಮಗಳೆಂದೇ ತಿಳಿಯಲವಕಾಶವಿದೆ. ಆದರೆ "ಬೌದ್ಧ ಕವಿಗಳು ಗಜಾನನ ಸ್ತೋತ್ರದೊಂದಿಗೆ ನಾಟಕವನ್ನು ಆರಂಭಿಸುವರೆ; ಕವಿಯು ಬೌದ್ಧನಾಗಿದ್ದರೆ ಆ ಸಂಬಂಧವಾದ ಸೂಚನೆಯೇನಾದರೂ ಒಂದು ವಿಧವಾಗಿ ರೂಪಕದಲ್ಲಿ ತೋರಿಬರುತ್ತಿರಲಿಲ್ಲವೆ;" ಎಂಬ ಈ ವಿಷಯಗಳು ವಿಚಾರಮಾಡತಕ್ಕಂತಿವೆ.

**ಬೌದ್ಧತಾರ್ಕಿಕದಿಙ್ನಾಗ**—ಸಾಹಿತ್ಯಕ್ಷೇತ್ರದಲ್ಲಿ ದಿಙ್ನಾಗನ ಹೆಸರು ಪ್ರಖ್ಯಾತಿಗೊಂಡಿರುವುದು. ದಿಙ್ನಾಗನೆಂಬವನೊಬ್ಬನು ಪುರಾತನ ತರ್ಕ

ಜ್ಞಾನಿಗಳಲ್ಲಿ ಶ್ರೇಷ್ಠನೆನಿಸಿದ್ದನು. ಅವನನ್ನು ಹಿಂದೂದೇಶದ ತಾರ್ಕಿಕರ ತಾತನೆಂದು ಗೌರವಿಸುತ್ತಿದ್ದರು. ಅವನೇ ಬೌದ್ಧನೈಯಾಯಿಕದಿಙ್ನಾಗನು. ಆತನೇ ಕುಂದಮಾಲೆಯನ್ನು ರಚಿಸಿರಬಹುದೆ ಎಂದು ಯೋಚಿಸಬೇಕಾಗಿದೆ. ನಾಟಕದ ಆಂತರಿಕವಿಷಯಗಳು ಭಾಸನ ನಾಟಕ ಮತ್ತು ಅವುಗಳ ಪ್ರಕೃತಿಗಿಂತ ಅಭಿವೃದ್ಧಿಹೊಂದಿದವುಗಳಾದುದರಿಂದ ಕುಂದಮಾಲೆಯು ಸಾಮಾನ್ಯವಾಗಿ ಕ್ರಿ. ಶ. ಐದನೇ ಅಥವಾ ಆರನೇ ಶತಾಬ್ದಗಳಲ್ಲಿ ಬರೆದುದಾಗಿರಬೇಕೆಂದು ಊಹಿಸಲವಕಾಶವಿದೆ. ಮೇಘದೂತವೆಂಬ ಖಂಡಕಾವ್ಯದಲ್ಲಿ ದಿಙ್ನಾಗನ ಪ್ರಸ್ತಾಪವು ಬಂದಿರುವುದರಿಂದ ದಿಙ್ನಾಗನು ಕಾಳಿದಾಸನ ಸಮಕಾಲಿಕನಾಗಿರಬೇಕು. ಬೌದ್ಧನೈಯಾಯಿಕದಿಙ್ನಾಗನ ಕಾಲವೂ ಇದೇ ಸಮಯಕ್ಕೇ ಬರುವುದು. ಅವನ ಕೃತಿಗಳು ಪರಮಾರ್ಥನಿಂದ ಚೀನಭಾಷೆಗೆ ಪರಿವರ್ತಿಸಲ್ಪಟ್ಟುದು ಕ್ರಿ. ಶ. 557—569ರಲ್ಲಿ. ತಾರ್ಕಿಕದಿಙ್ನಾಗನೂ ರೂಪಕಕರ್ತೃದಿಙ್ನಾಗನೂ ಸಮಕಾಲೀನರೆಂಬುದು ಬಹುಪ್ರಾಮುಖ್ಯವಾದ ಸಂಗತಿಯಾಗಿದೆ. ರೂಪಕಕಾರನು ನಾಂದಿಯಲ್ಲಿ ಈಶ್ವರಪುತ್ರನಾದ ವಿಘ್ನೇಶ್ವರನನ್ನು ಸ್ತುತಿಸುತ್ತಾನೆ. ಇದು ಬೌದ್ಧಧರ್ಮದ ತತ್ವಗಳನ್ನು ತಿಳಿದವನಿಗೆ ವಿರೋಧವಲ್ಲವೆ?

ರೂಪಕವು ಆದ್ಯಂತವಾಗಿ ಹಿಂದೂಧರ್ಮದ ಪೌರಾಣಿಕಭಾವನೆಗಳಿಂದ ತುಂಬಿರುವುದು. ಇಂತಹ ಪ್ರಾಮುಖ್ಯವಿಷಯಗಳನ್ನು ಪರಿಶೀಲಿಸಿದಾಗ ಈತನು ತಾರ್ಕಿಕದಿಙ್ನಾಗನಿಗಿಂತ ಭಿನ್ನನಾಗಿರಬೇಕೆಂದು ತೋರುತ್ತಿದೆ. "ಅರಾರಾಲಪುರ" ಅಥವಾ ಅನೂಪುರಾದ ಎಂಬ ಸ್ಥಳಗಳೆಲ್ಲಿಯೂ ಇದ್ದ ಹಾಗೆ ತಿಳಿಯುವುದಿಲ್ಲ. ಮಾತೃಕೆಯು ಗ್ರಂಥಲಿಪಿಯಲ್ಲಿ ಬರೆದಿದ್ದುದರಿಂದ ಸಿಲೋನಿನ "ಅನುರಾಧಾಪುರ"ವನ್ನು ಸೂಚಿಸುವುದೂ ಸಮಂಜಸವೆಂದು ತೋರುವುದಿಲ್ಲ. ರೂಪಕದ ಸನ್ನಿವೇಶಗಳನ್ನು ಪರಿಶೀಲಿಸುವಾಗ ಕವಿಯು ದಕ್ಷಿಣ ಹಿಂದೂದೇಶದವನೂ ಬೌದ್ಧನೈಯಾಯಿಕಭಿನ್ನನೂ ಆಗಿರಬೇಕೆಂದು ಊಹಿಸಲವಕಾಶವಿದೆ. ಭಾವಪ್ರಕಾಶ, ಶೃಂಗಾರಪ್ರಕಾಶ, ಸಾಹಿತ್ಯದರ್ಪಣ, ಮಹಾನಾಟಕ ಮೊದಲಾದ ಉದ್ಗ್ರಂಥಗಳಲ್ಲಿ ಕುಂದಮಾಲೆಯನ್ನು ಪ್ರಸ್ತಾಪಿಸಿರುವುದರಿಂದ ಕವಿಯ ಹಾಗೂ ರೂಪಕದ ಯೋಗ್ಯತೆಯು ಸಾಮಾನ್ಯವಲ್ಲವೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

**ಕಥೆಯ ಮೂಲ—** ಕವಿಯು ಕುಂದಮಾಲೆಗೆ ವಸ್ತುವನ್ನು ವಾಲ್ಮೀಕಿ ರಾಮಾಯಣದ ಉತ್ತರಕಾಂಡದಿಂದ ಆರಿಸಿಕೊಂಡಿರುವನು. ಭವಭೂತಿಯು

ಬರೆದ ಉತ್ತರರಾಮಚರಿತ್ರೆಯು ಕೂಡ ಆ ಭಾಗವನ್ನೇ ಒಳಗೊಂಡಿರುವುದು. ಮಹಾಭಾರತದಲ್ಲಿ ರಾಮೋಪಾಖ್ಯಾನವಿರುವುದಾದರೂ ಕುಂದಮಾಲೆಯು ಅದರ ಆಧಾರದಿಂದ ಬರೆಯಲ್ಪಟ್ಟಂತೆ ತೋರುವುದಿಲ್ಲ. ಕಥಾಮೂಲವು ರಾಮಾಯಣದಿಂದ ಉದ್ಧೃತವಾದರೂ ರೂಪಕಕ್ಕೆ ಅನುಕೂಲವಾಗುವಂತೆ ಇಲ್ಲಿ ಹೆಚ್ಚು ಬದಲಾವಣೆ ಹೊಂದಿರುವುದು. ರಾಮಾಯಣದಲ್ಲಿ ರಾಮನು ಲಕ್ಷ್ಮಣನೊಡನೆ ತಮಸಾನದೀತೀರದಲ್ಲಿರುವ ಋಷ್ಯಾಶ್ರಮದ ಆಚೆ ಸೀತೆಯನ್ನು ಬಿಟ್ಟುಬರುವಂತೆ ಹೇಳುವನು. ಆಶ್ರಮವು ಅವಳಿಗೆ ಆಶ್ರಯವೀಯಬೇಕೆಂಬುದೇ ಉದ್ದೇಶವಿರುವಂತೆ ತೋರುವುದು. ಲಕ್ಷ್ಮಣನು ಕರೆದುಕೊಂಡು ಹೋಗಿ ಕಾಡಿನಲ್ಲಿ ಬಿಡುವಾಗ ಸೀತೆಯೊಡನೆ "ಜನಕಾತ್ಮಜೆ, ನಮ್ಮ ತಂದೆಗೆ ಪರಮಸ್ನೇಹಿತನಾದ ವಾಲ್ಮೀಕಿಯೆಂಬ ಹೆಸರಿನ ಮುನಿಪುಂಗವನಿರುವನು. ಈ ಮರದ ನೆರಳಲ್ಲಿದ್ದುಕೊಂಡು ಅವನನ್ನೇ ಇದಿರುನೋಡುತ್ತಿರು" ಎಂದು ಹೇಳುವನು. ಕುಂದಮಾಲೆಯಲ್ಲಿ ಲಕ್ಷ್ಮಣನು ಗಂಗಾನದಿಯನ್ನು ದಾಟಿ ಹೋಗುವುದಿಲ್ಲ. ಸೀತೆಯನ್ನು ಗಂಗಾತೀರದಲ್ಲೇ ಬಿಟ್ಟುಬಿಡುವನು. ಈಚೆಯ ದಡದಲ್ಲೇ ವಾಲ್ಮೀಕಿಯ ಆಶ್ರಮವೂ ಇರುವುದು. ಎರಡರಿಂದ ನಾಲ್ಕು ಅಂಕಗಳ ಕಥಾಂಶಗಳು ರಾಮಾಯಣದಲ್ಲಿರುವುದಿಲ್ಲ. ಪ್ರೇಕ್ಷಕರ ಅಭಿರುಚಿಯನ್ನು ಬಯಸುತ್ತ ಕವಿಯು ಅವುಗಳನ್ನು ಸ್ವಪ್ರತಿಭೆಯ ಬಲದಿಂದಲೇ ಕಲ್ಪಿಸಿಕೊಂಡಿರುವನು. ಹೆಚ್ಚಿನ ಈಯಂಶಗಳನ್ನೆಲ್ಲ ಭವಭೂತಿಯು ತನ್ನ ಉತ್ತರರಾಮಚರಿತ್ರೆಯಲ್ಲಿ ಆಯ್ದುಕೊಂಡಿರುವನು. ರಾಮಾಯಣವು ವಿಷಾದಾಂತವಾಗಿದೆ. ಆದರೆ ದಿಙ್ನಾಗನು ಸಂಸ್ಕೃತರೂಪಕಗಳ ಪದ್ಧತಿಯನ್ನು ಮೆಚ್ಚಿದವನಾಗಿ ರುದ್ರನಾಟಕಗಳ ಕಡೆಗೆ ಗಮನಕೊಟ್ಟಿರುವುದಿಲ್ಲ. ಸೀತೆಯು ರಾಮನಿಂದ ಪರಿಗ್ರಹಿಸಲ್ಪಡುವಳು. ಹತ್ತು ವರುಷಗಳ ವಿಯೋಗವುಂಟಾಗಿದ್ದರೂ ಆ ದಂಪತಿಗಳು ಒಂದಾಗುವರು. ಕುಶನು ಮಹಾರಾಜನಾಗಿಯೂ ಲವನು ಯುವರಾಜನಾಗಿಯೂ ನೇಮಿಸಲ್ಪಡುವರು. ಹೀಗೆ ಪ್ರತಿಯೊಂದಂಶವೂ ಸಂತೋಷದಿಂದಲೇ ಕೊನೆಗೊಳ್ಳುವುದೆಂಬುದು ವಾಲ್ಮೀಕಿಯ ಪ್ರಶ್ನೆಗೆ ರಾಮನಿತ್ತ "ಬಿದಿಯಿಂತ್ವದ್ದರ್ಶನ"ಮೆಂಬ ಉತ್ತರದಿಂದ ತಿಳಿಯುವುದು.

**ದಿಙ್ನಾಗನ ಶೈಲಿ**—ದಿಙ್ನಾಗನ ಗೌರವವನ್ನು ಮೆಚ್ಚದೆ ಹೋದನೆಂಬುದರಿಂದ ಕವಿಕುಲಗುರುವೆನಿಸಿದ ಕಾಳಿದಾಸನು ತನ್ನ ಯೋಗ್ಯತೆಯನ್ನು ಕುಗ್ಗಿಸಿಕೊಂಡಂತೆಯೇ ಸರಿ. ದಿಙ್ನಾಗನು ಪ್ರಖ್ಯಾತನೆಂದು ತಿಳಿದುದ

ರಿಂದಲೇ ಸಮಾನವೃತ್ತಿಯ ಕಾಳಿದಾಸನು ಆಪೂಯಿಸಲ್ಪಟ್ಟಿರಬಹುದೆಂದು ಭಾವಿಸಿದರೂ ಹೆಚ್ಚಾಗದು. ಆ ಕಾಲದಲ್ಲಿ ಕಾಳಿದಾಸನೊಡನೆ ಸ್ಪರ್ಧಿಸುವ ಧೈರ್ಯವಿದ್ದವನು ಇವನೊಬ್ಬನೇ ಸರಿ. ಅಥವಾ ನೈಯಾಯಿಕದಿಙ್ನಾಗನ ಕುರಿತು ಕಾಳಿದಾಸನು ನಿಂದಿಸಿರುವುದಾದರೆ ನಮಗೆ ಅದರ ವಿಚಾರವು ಅಗತ್ಯವಿಲ್ಲ. ಕಾಳಿದಾಸನ ಆಕರ್ಷಕವಾದ ಲಾಲಿತ್ಯ, ಭವಭೂತಿಯ ಉಜ್ವಲವಾದ ನೈಜತೆ, ಇವುಗಳ ಸಮ್ಮಿಲನವೇ ದಿಙ್ನಾಗನ ಶೈಲಿಯೆಂದು ಹೇಳಬಹುದು. ಆದರೆ, ಕಾಳಿದಾಸನ ಮಾಧುರ್ಯದ ಬೆಡಗು ಇವನಲ್ಲಿ ರುವುದಿಲ್ಲ. ಆ ಭಾವನಾಧಿಕ್ಯವೂ ಇರಲಾರದು. ಕಾಳಿದಾಸನಂತಹ ಆದರ್ಶಕವಿಯು ಇವನಲ್ಲದೆ ಹೋದರೂ ಕಾಳಿದಾಸನ ವ್ಯಕ್ತಿನಿರ್ದೇಶಗಳಿಗಿಂತ ಹೆಚ್ಚಿನ ನೈಜತೆಯನ್ನು ಇವನಲ್ಲಿ ಕಾಣುವೆವು. ಸೀತಾರಾಮರು ಶಕುಂತಲೆ ದುಷ್ಯಂತರಿಗಿಂತ ಜೀವನರಂಗದಲ್ಲಿ ಹೆಚ್ಚಿನ ಅನುಭವಶಾಲಿಗಳು. ಕಾಳಿದಾಸನ ಶಕುಂತಲೆಗಿಂತ ಭವಭೂತಿಯ ಸೀತೆಯು ಹೆಚ್ಚಿನ ನೈಜತೆಯನ್ನು ತೋರಿಸುವಳಾದರೂ ಕುಂದಮಾಲೆಯ ಸೀತೆಯು ಲೋಕಕ್ಕೆಲ್ಲಾ ಆದರ್ಶಪ್ರಾಯಳಾಗಿರುವಳು. ಸಹೃದಯರು ತಲೆದೂಗುವಂತೆ ದಿಙ್ನಾಗನು ಸಹಜಸುಂದರವಾದ ಸರಳಶೈಲಿಯಲ್ಲಿ ಬರೆದಿರುವುದರಿಂದ ರೂಪಕದ ಯೋಗ್ಯತೆಯನ್ನು ಸರ್ವರೂ ತಿಳಿದುಕೊಳ್ಳಲು ಅನುಕೂಲವಾಗಿರುವುದು. ಹೆಚ್ಚುಕಡಿಮೆ ಭಾಸನ ಹಾಗೆಯೇ ದಿಙ್ನಾಗನೂ ಪ್ರತಿಭಾಶಾಲಿಕವಿಯೆಂದರೆ ಅತಿಶಯವಾಗಲಾರದು. ಸರಳವಾದ ಶೈಲಿ, ಕುಂದಿಲ್ಲದ ವಿಷಯಸಮರ್ಥನೆ, ತಕ್ಕ ಉಪಮಾಪ್ರಯೋಗ, ಕಲ್ಲೆದೆಯನ್ನೂ ಕರಗಿಸುವ ಕರುಣೆ, ಅಕೃತ್ರಿಮ ಪ್ರೇಮ, ವಾತ್ಸಲ್ಯನಿರ್ದೇಶ, ಸಹಜವರ್ಣನೆ ಮೊದಲಾದ ಯೋಗ್ಯತೆಗಳಿಂದ ದಿಙ್ನಾಗನು ಕಲೆಗಳ ಮರ್ಮವನ್ನು ತಿಳಿದ ಉತ್ತಮಕವಿಯೆಂಬುದರಲ್ಲಿ ಸಂದೇಹವಿಲ್ಲ.

**ಕುಂದಮಾಲೆಯೂ ಉತ್ತರರಾಮಚರಿತ್ರೆಯೂ—** ಈ ದೃಶ್ಯಕಾವ್ಯಗಳೆರಡೂ ರಾಮಾಯಣದ ಉತ್ತರಕಾಂಡದಿಂದ ವಸ್ತುವನ್ನು ಗ್ರಹಿಸಿಕೊಂಡು ರೂಪಕಕ್ಕೆ ಅನುಕೂಲವಾಗುವ ಹಾಗೆ ಅನೇಕ ಬದಲಾವಣೆಗಳೊಡನೆ ನಿರೂಪಿಸಲ್ಪಟ್ಟವೆ. ಮಂಗಳಾಂತಗಳಾಗಿರುವಂತೆ ಸೀತಾರಾಮರ ಸಮಾಗಮದಿಂದ ಕೊನೆಗೊಳ್ಳುವುವು. ಪರಿತ್ಯಕ್ತಳಾದ ಸೀತೆಗಾಗಿ ರಾಮನು ಮರುಗುತ್ತಿರುವುದನ್ನು ಸೀತೆಯು ಮರೆಯಲ್ಲಿದ್ದು ತಾನೇ ನೋಡುತ್ತಿರುವಂತೆ ಕಲ್ಪಿಸಿದ ಕವಿಯ ಪ್ರತಿಭೆಯು ಸಾಮಾನ್ಯವಲ್ಲ. ಈ ವಿಷಯದಲ್ಲಿ ಭವಭೂ

ತಿಯು ಕುಂದಮಾಲೆಯ ಕವಿಗೆ ಕೃತಜ್ಞನಾಗಿರಬೇಕು. ದಂಡಕಾರಣ್ಯದಲ್ಲಿ ರಾಮನು ವಾಸಂತಿಯೊಡನೆ ಸೀತೆಯನ್ನು ಕಂಡ ಸನ್ನಿವೇಶವು ಕುಂದಮಾಲೆಯ ಪ್ರತಿಕೃತಿಯಂತೆ ತೋರುವುದು. ಭವಭೂತಿಯ ವರ್ಣನಾವೈಖರಿ, ಕವಿತಾಭಾವನೆ, ಮನೋವೇಗ ಮೊದಲಾದ ಉತ್ತಮಗುಣಗಳು ಕುಂದಮಾಲೆಯಲ್ಲಿ ಸ್ವಲ್ಪಮಾತ್ರವೇ ಕಂಡುಬರುವುವಾದರೂ ಉತ್ತರರಾಮಚರಿತ್ರೆಯಲ್ಲಿ ಇಲ್ಲದ ಕೆಲವು ಗುಣಗಳು ಇಲ್ಲಿ ತೋರುವುವು. ಕುಂದಮಾಲೆಯ ಗದ್ಯಪದ್ಯಗಳ ಸರಳತೆಯು ಆಲೋಚನಾಶಕ್ತಿ ಕ್ರಿಯಾಶಕ್ತಿಗಳ ವೃದ್ಧಿಗೆ ಹೇತುವಾಗಿರುವುದು. ಉತ್ತರರಾಮಚರಿತ್ರೆಯಲ್ಲಿ ನಾಟಕಕ್ಕೆ ವಿರೋಧವಾದ ದೊಡ್ಡ ದೊಡ್ಡ ವರ್ಣನೆಗಳು ಅನುಪ್ರಾಸಾದಿ ಶಬ್ದಾಡಂಬರಗಳೂ ಕಂಡುಬರುತ್ತಿವೆ. ದಿಙ್ನಾಗನ ವರ್ಣನೆಗಳು–ಕಷ್ಟಪಟ್ಟು ತಂದವುಗಳಲ್ಲ. ಭವಭೂತಿಯು ವಿದೂಷಕಪಾತ್ರವನ್ನೇ ಬಿಟ್ಟಿರುವನು. ಕರುಣರಸಪ್ರಧಾನವಾದ ತನ್ನ ನಾಟಕದಲ್ಲಿ ವಿದೂಷಕನನ್ನು ತರುವುದು ಅಷ್ಟು ಸಮಂಜಸವಲ್ಲವೆಂದು ಆತನಿಗೆ ತೋರಿರಬೇಕು. ಸಂಸ್ಕೃತನಾಟಕಗಳಲ್ಲಿ ಹೆಚ್ಚಾಗಿ ವಿದೂಷಕನನ್ನು ತರುವುದು ಪದ್ಧತಿಯಂತೆ ಕಂಡುಬರುವುದು. ರಾಜನೊಡನೆ ವಿದೂಷಕನಿದ್ದರೆ ಆ ರೂಪಕಕ್ಕೆ ಶೋಭೆಯೆಂಬ ಹಾಗೆ ಕುಂದಮಾಲೆಯಲ್ಲೂ ವಿದೂಷಕನನ್ನು ನೋಡುವೆವು. ಆದರೆ, ಭವಭೂತಿಯಂತೆ ವಿದೂಷಕನನ್ನು ಕಲ್ಪಿಸದೆ ಇರುತ್ತಿದ್ದರೆ ರೂಪಕವು ಇನ್ನಷ್ಟು ಚೆನ್ನಾಗಿ ಒಪ್ಪುತ್ತಿದ್ದಿತೋ ಏನೋ ಎಂಬ ಹಾಗೆ ಮುಖ್ಯವಾಗಿ ಕರುಣರಸವು ಪ್ರವಹಿಸುತ್ತಿದೆ.

ಭವಭೂತಿಯ ರಾಮನು ಮನುಷ್ಯರಲ್ಲಿ ಪ್ರಖ್ಯಾತನೂ ಸದ್ಗುಣಿಗಳಗನಿಯೂ ಆಗಿರುವನು. ಸೀತೆಯು ಸಾಕ್ಷಾದ್ದೇವಿಯೇ ಆಗಿರುವಳು. ಭವಭೂತಿಯು ಕಾಡಿಗೆ ಕಳುಹಿಸುವುದಕ್ಕೆ ಸನ್ನಿವೇಶಗಳನ್ನೊದಗಿಸಿಕೊಂಡು ರಾಮನ ಸೀತಾಪರಿತ್ಯಾಗವನ್ನು ಸಮರ್ಥಿಸಿಕೊಳ್ಳುವುದನ್ನು ಕಾಣುವೆವು. ಆದರೆ ದಿಙ್ನಾಗನು ರಾಮನ ಕೆಲಸಗಳನ್ನು ಸರಿಯೆಂದು ಪ್ರತಿಪಾದಿಸಲು ಕಷ್ಟಪಡುವುದಿಲ್ಲ. ಕುಂದಮಾಲೆಯ ರಾಮನು ಉತ್ತರರಾಮಚರಿತ್ರೆಯ ರಾಮನಿಗಿಂತ ಹೆಚ್ಚು ಮಾನುಷಧರ್ಮವುಳ್ಳವನು. ಸೀತೆಯೂ ಮನುಜಭಾವನೆಯಿಂದಲೇ ಯೋಚಿಸುವವಳು. ಭವಭೂತಿಯು ತನ್ನ ಸೀತೆಯ ಮುಖದಿಂದ “ನಿರ್ದಯನಾದ ಆತನಿಗೆ ಸಮಾನವಾದ ಪ್ರಸವವನ್ನು ಹಾರೈಸುತ್ತ ಅಪವಾದವೆಂಬ ಕಂಟಕವು ನಾಟಿದ ಈ ಜೀವನವನ್ನು ಹೇಗಾದರೂ ನಿರ್ವಹಿಸುವೆನು” ಎಂಬ ಮಾತನ್ನು ಹೇಳಿಸಲಾರನು. ದಿಙ್ನಾಗನ

ಸೀತೆಯು ಕೇವಲ ದೇವಿಯಲ್ಲ; ಆದರ್ಶ ಮಹಿಳೆ. ಹೀಗೆ ಮನುಷ್ಯರಲ್ಲಿ ಸಂಭವಿಸತಕ್ಕ ಸನ್ನಿವೇಶಗಳಿಂದಲೇ ಕವಿಯು ಕುಂದಮಾಲೆಗೆ ವಿಶೇಷವಾಗಿ ಕಳೆಗೂಡಿಸಿರುವನು.

**ದಿಙ್ನಾಗನ ಪಾತ್ರರಚನೆ**— ಇವನು ಪಾತ್ರರಚನೆಯಲ್ಲಿ ವಿಶೇಷ ವಾಗಿ ಚಾತುರ್ಯವನ್ನು ತೋರಿಸಿಕೊಂಡಿರುವನು. ಪ್ರಧಾನವಾಗಿ ರಾಮ, ಸೀತೆ, ಲಕ್ಷ್ಮಣ, ವಾಲ್ಮೀಕಿ ಇವರ ಪಾತ್ರಗಳು; ಅಪ್ರಧಾನವಾಗಿ ಕುಶ, ಲವ, ವೇದವತಿ ಮುಂತಾದವುಗಳು.

**ರಾಮ**— ಅಪಾರಮಹಿಮೆಯ ಪ್ರಭಾವದೊಡನೆ ರಾಮನ ವ್ಯಕ್ತಿತ್ವವು ಪ್ರದರ್ಶಿಸಲ್ಪಟ್ಟಿದೆ. ಆತ್ಮನಿಗ್ರಹ ಭಕ್ತಿ ಪ್ರಜಾರಂಜನೆ ಮೊದಲಾದವುಗಳೇ ಅವನ ಮುಖ್ಯಗುಣಗಳು ಅವನು, ಜನರಿಗಾಗಿ ಪ್ರಖ್ಯಾತ ವಾದ ತನ್ನ ಕುಲಗೌರವದ ಪಾಲನೆಗಾಗಿ ಅನುಮಾನವೇನೂ ಇಲ್ಲದೆ ವಿಧೇಯಳೂ ಅಂತರ್ವತ್ನಿಯೂ ಆಗಿರುವ ತನ್ನ ಪತ್ನಿಯನ್ನು ಹೃದಯದ ಮೂರ್ತಿಯನ್ನು ಪರಿತ್ಯಜಿಸಿದನು. ಪ್ರಜಾರಂಜನೆಯಲ್ಲಿ ನಿರತನಾಗಿದ್ದ ಆ ಸಾರ್ವಭೌಮನು ಇದು ತನ್ನ ಕರ್ತವ್ಯವೆಂದು ಸ್ವಸುಖನಿರಭಿಲಾಷನಾಗಿ ಸೀತೆಯನ್ನು ಅರಣ್ಯಕ್ಕೆ ಅಟ್ಟಿದನು. ಆದರೆ ಅವಳ ಅಗಲಿಕೆಯಿಂದ ಜೀವನದಲ್ಲಿ ತನಗೇನೂ ಸುಖಸಂತೋಷವಿಲ್ಲವೆಂಬುದನ್ನು ಆತನು ತಿಳಿಯದಿರಲಿಲ್ಲ. ಅವನ ಹೃದಯವು ಸದಾ ಬೇಗುದಿಗುದಿಯುತ್ತಿತ್ತು. ಅವಳನ್ನು ಕಳಕೊಂಡ ಹತ್ತು ವರುಷಗಳ ಮೇಲೆಯೂ ನೈಮಿಷಾರಣ್ಯದಲ್ಲಿ ಆ ನಿರ್ಭಾಗ್ಯಳ ಸಲುವಾಗಿ ದುಃಖಿಸುತ್ತಾನೆ. ಒಂದು ದಿನವಾದರೂ ಅವನು ಸುಖವಾಗಿರದೆ ನಾಟಕದ ಆದ್ಯಂತವೂ ಮರುಗುತ್ತಿರುವುದನ್ನು ನಾವು ಕಾಣುವೆವು. ಗೋಮತೀ ತೀರದಲ್ಲಿ ಸುರಭಿವನವಾತದ ಸ್ಪರ್ಶವಾಗುತ್ತಲೇ ತನ್ನ ಆರಾಧ್ಯದೇವತೆಯಾದ ಸೀತೆಯು ಸಮೀಪದಲ್ಲೇ ಜೀವಿಸುತ್ತಿರುವಳೆಂದು ಭಾವಿಸಿಕೊಳ್ಳುವನು. ಆಕೆ ಪೋಣಿಸಿದ ಕುಂದಮಾಲೆಯನ್ನೂ ಅವಳ ಹೆಜ್ಜೆಯ ಗುರುತನ್ನೂ ಮುಂಜೆರಗನ್ನೂ ಪಕ್ಕನೆ ಗುರುತಿಸುವನು. ನೈಮಿಷಾರಣ್ಯ ಮಾರ್ಗದ ದೃಶ್ಯಗಳು ಅವನ ಹೃದಯವನ್ನು ಎಚ್ಚರಿಸಿ ಹಿಂದಕ್ಕೆ ಸೆಳೆದು ಬಿಡುವುವು. ಮೊದಲು ದಂಡಕೆಯಲ್ಲಿ ಪ್ರೇಯಸಿಯೊಡನೆ ಅನುಭವಿಸಿದ ಸವಿಗಳೊಂದೊಂದನ್ನಾಗಿ ಸ್ಮರಿಸಿಕೊಳ್ಳುವನು. ಕೊಳದಲ್ಲಿ ಸೀತೆಯ ಪ್ರತಿಬಿಂಬವು ಪಕ್ಕನೆ ಅದೃಶ್ಯವಾದುದಕ್ಕಾಗಿ ಮರುಗುವ ಅವನ ದೃಶ್ಯವು ರೂಪಕಕ್ಕೆ ಹೆಚ್ಚಿನ ಯೋಗ್ಯತೆಯನ್ನು ತಂದಿರುವುದು. ಪರಿತ್ಯಕ್ತಳಾದ ರಾಣಿಯು ಆತನ ವಿಷಣ್ಣಹೃದಯದಲ್ಲೇ ಸದಾ ಸಂಚರಿಸುತ್ತಿದ್ದಳಾದರೂ ಅವನು

ಅವಳಿಗಾಗಿ ನಿರಾಶೆಯಿಂದ ಮರುಗುವನು. ಸಮಾಧಾನಪಡಿಸಬೇಕೆಂದು ಪ್ರಯತ್ನಪಡುವ ಲಕ್ಷ್ಮಣನೊಡನೆ ಗದ್ಗದಸ್ವರದಿಂದ ಉತ್ತರಕೊಡುವುದನ್ನು ಕಾಣುವೆವು. ನಡೆಯುವಾಗ ಎಡವಿಬೀಳುವಂತೆ ಚಿಂತೆಯು ಅವನನ್ನು ಕುಗ್ಗಿಸಿರುವುದು. ಸರೋವರದಲ್ಲಿ ಸೀತೆಯನ್ನು ಹುಡುಕಿ ಕಾಣದೆ ಹಂಬಲಿಸುತ್ತ ಮೈಮರೆಯುವನು. ಅವಳ ಆಲಿಂಗನವು ಅವನನ್ನೆಚ್ಚರಿಸುವುದು. ಮೊದಲಿನ ತನ್ನ ಕ್ರೌರ್ಯವನ್ನು ಮನ್ನಿಸಬೇಕೆಂದು ಬೇಡಿಕೊಳ್ಳುವನು. ಹುಣ್ಣಿಮೆಯ ರಾತ್ರಿ ಅವಳ ತೋಳನ್ನು ತಲೆದಿಂಬಾಗಿ ಮಾಡಿ ಉದ್ಯಾನದಲ್ಲಿ ವಿನೋದದಿಂದ ಸಮಯಕಳೆಯಬೇಕೆಂದು ಹಂಬಲಿಸುವನು. ಈ ದೃಶ್ಯಗಳೆಲ್ಲವೂ ರಾಮನ ಪ್ರೇಮವು ಅಗಾಧವೆಂಬುದನ್ನು ಸಾರುತ್ತಿವೆ. "ಪ್ರೇಮಾವೇಶವು ಸಹೇತುಕವೆಂಬುದು ಇತರ ದಂಪತಿಗಳ ವಿಷಯಕವಾದುದು; ಸೀತಾರಾಮರ ವಿಷಯದಲ್ಲಿ ಹಾಗಲ್ಲ"ವೆಂದು ವಿವರಿಸುವ ರಾಮನ ವಾಕ್ಯವು ತನ್ನ ಹೃದಯವು ಹೇಗಿರುವುದೆಂಬುದಕ್ಕೆ ಒರೆಗಲ್ಲಾಗಿರುವುದು.

ರಾಮನ ಗುಣವು ಕುಶಲವರ ಭೇಟಿಯ ಸಂದರ್ಭದಲ್ಲಿ ವಿಶೇಷವಾಗಿ ಕಂಡುಬರುವುದು. ಅವರನ್ನು ನೋಡಿದ ಕೂಡಲೇ ಇವನಲ್ಲಿ ಪ್ರೀತಿಯು ಉಕ್ಕುವುದು. ಸರಿಯಾಗಿ ದೃಷ್ಟಿಸಲಾರದೆ ಹೋದರೂ ಇವನ ಹೃದಯವು ಭಯಸಂತೋಷವ್ಯಸನಕನಿಕರಗಳಿಂದ ಕೂಡುವುದು. ಅವರನ್ನು ಅಪ್ಪಿಕೊಂಡೊಡನೆ ಅವನ ಹೃದಯವು ಸಂತೋಷದಿಂದ ದ್ರವಿಸುವುದು. ಅವನು ಏಕಪತ್ನೀವ್ರತವನ್ನು ಹೇಗೆ ಪಾಲಿಸುವನೆಂಬ ಸಂದರ್ಭವು ವಿದೂಷಕನೊಡನೆ ನಡೆದ ಸ್ತ್ರೀವಿಷಯಕವಾದ ಸಂಭಾಷಣೆಯಿಂದ ಸ್ಫುಟವಾಗುವುದು. ವೇಶ್ಯೆಯಿಂದ ತಾನು ವಂಚಿತನಾದೆನೇ ಎಂಬುದನ್ನು ಪರಾಮರ್ಶಿಸುತ್ತ ತಣ್ಣಗಾಗುವ ರಾಮನನ್ನು ನೋಡಿದರೆ ಅವನೆಂತಹ ಅಧರ್ಮಭೀರುವೆಂಬುದು ತಿಳಿಯದಿರಲಾರದು. ತಾನು ಮಾಡಿದುದೆಲ್ಲ ಸರಿಯೆಂದು ಅಹಂಕಾರಪಡುವ ಇಲ್ಲವೆ ಸಮಾಧಾನ ತಂದುಕೊಳ್ಳುವ ಹಾಗೆ ರಾಮನು ಇರುವುದಿಲ್ಲ. ನೊಂದ ಹೃದಯದ ರಾಮನಿಗೆ "ನಿರನುಕ್ರೋಶ"ನೆಂಬ ಮಾತು ಕೇಳಿಸುವುದು. ವಾಲ್ಮೀಕಿಯು ಸ್ವಲ್ಪ ಜೋರಾಗಿಯೇ ಮಾತಿಗೆ ಮಾತು ಮಸೆಯುವನು. ಅಂತೂ ರಾಮನ ಸ್ಥಿತಿಯು ಅಪರಾಧಿಯು ಪಶ್ಚಾತ್ತಾಪಪಡುವ ರೀತಿಯಲ್ಲಿದ್ದು ಪ್ರೇಕ್ಷಕರಿಗೆ ತೃಪ್ತಿದಾಯಕವಾಗಿರುವುದು.

ರಾಮಾಯಣವನ್ನು ಗಾನಮಾಡುತ್ತಿದ್ದ ಕುಶಲವರನ್ನು ರಾಮ ಪಟ್ಟಾಭಿಷೇಕದ ಸಂದರ್ಭದಲ್ಲೇ ತಡೆದು "ಸೀತಾಪರಿತ್ಯಾಗದಿಂದ ಮೊದಲು ಮಾಡಿ

ಹಾಡಿರಿ" ಎಂದು ಹೇಳಿ ತಾನು ಕೈಕಾಮಾತೆಯು ನಿಂದೆಯನ್ನು ಕೇಳಲಾರ ದವನೆಂಬುದನ್ನು ವ್ಯಕ್ತಪಡಿಸುವನು. ಮುನಿಗಳಲ್ಲಿ ಆತನ ಗೌರವವು ಅಪಾರವಾಗಿರುವುದು. ಮುನಿಪುತ್ರರು ಸಂಬೋಧಿಸುವುದನ್ನು ಕೇಳಿ ಮುನಿ ಗಳ ಗೌರವವನ್ನು ಕಾಪಾಡಲು ತನ್ನ ಪದವಿಯನ್ನಾದರೂ ಕಡೆಗಣಿಸುವನು. ಇವೆಲ್ಲವೂ ರಾಮನ ಆತ್ಮದ ಘನತೆಗೆ ಸಾಕ್ಷಿಗಳೆಂದೂ ಅವನು ಮನುಷ್ಯ ಲೋಕದಲ್ಲಿ ಆದರ್ಶಪುರುಷನೆಂದೂ ಪ್ರೇಕ್ಷಕರ ಹೃದಯದಲ್ಲಿ ಸತ್ಪರಿಣಾಮ ವನ್ನುಂಟುಮಾಡುವ ಉತ್ತಮೋತ್ತಮಕಥಾನಾಯಕನೆಂದೂ ಸರ್ವರೂ ಕೊಂಡಾಡುವ ಹಾಗೆ ಕವಿಯು ರಾಮನ ಪಾತ್ರವನ್ನು ಕಲ್ಪಿಸಿರುವನು.

**ಸೀತೆ—** ಈ ಪಾತ್ರವು ಚಿತ್ತಾಕರ್ಷಕವಾದುದು. ಸ್ತ್ರೀತ್ವದ ಸಕಲ ಸದ್ಗುಣಗಳೂ ಇವಳಲ್ಲಿ ಅಡಗಿರುವುವು. ಸ್ವಾರ್ಥತ್ಯಾಗ, ಪರಿಶುದ್ಧತೆ, ಧೈರ್ಯ, ಸಹನೆ, ಮೊದಲಾದ ವಿಶಿಷ್ಟಗುಣಗಳೇ ಅವತರಿಸಿ ಬಂದಂತೆ ಸೀತಾದೇವಿಯು ತೋರಿಬರುವಳು. ಅಪವಾದದ ಸಲುವಾಗಿ ದೇಶದಿಂದ ಹೊರತಳ್ಳಲ್ಪಟ್ಟಳು. ಈ ಸಂಗತಿಯು ಗಂಗಾತೀರದಲ್ಲಿ ಲಕ್ಷ್ಮಣನಿಂದ ತಿಳಿಯಿತು. ಕೇಳಿದೊಡನೆ ಪ್ರಜ್ಞೆತಪ್ಪಿ ಬೀಳುವಳು. ಸ್ಮೃತಿ ಬಂದ ಬಳಿಕ ಕಾರಣವನ್ನು ವಿಚಾರಿಸುವಳು. ಜೀವನದ ಅವಮಾನವು ಅವಳನ್ನು ಆತ್ಮ ಹತ್ಯೆಮಾಡಲು ಪ್ರೋತ್ಸಾಹಿಸುವುದು. ಗರ್ಭದಲ್ಲಿದ್ದ ಇಕ್ಷ್ವಾಕುವಂಶದ ಕುಡಿಗಾಗಿ ಮಾತ್ರವೇ ಅವಳು ಜೀವದಿಂದ ಉಳಿಯುವಳು. ಪತಿಯು ಅವಳನ್ನು ಪ್ರೀತಿಸುವನು ಎಂಬುದನ್ನು ಕೇಳಿ ಸಂತೋಷಪಡುವಳು. ದಾರುಣವಾದ ತನ್ನ ಸಂಕಷ್ಟದಲ್ಲಿಯೂ ಪತಿಯ ಸೌಕರ್ಯಗಳನ್ನೇ ಗಮನಿ ಸುವಳು. ತನ್ನ ಅಗಲಿಕೆಯಿಂದ ಕೊರಗುತ್ತಿರದೆ ವರ್ಣಾಶ್ರಮರಕ್ಷಣೆ, ದೇಹರಕ್ಷಣೆಗಳನ್ನು ನೋಡಿಕೊಳ್ಳುವಂತೆ ಸಂದೇಶಕಳುಹಿಸುವಳು. ಧರ್ಮಕರ್ಮಪರಿಪಾಲನೆಗೆ ಮನ್ನಣೆ ಕೊಡುವಂತೆ ಲಕ್ಷ್ಮಣನೊಡನೆ ಹೇಳಿ ತನ್ನನ್ನು ತ್ಯಜಿಸಲು ಬಂದ ಮೈದುನನನ್ನು ಕೂಡಲೇ ಹಿಂದಕ್ಕೆ ಕಳು ಹಿಸುವಳು.

ದಿಙ್ನಾಗನ ಸೀತೆಯು ಮನುಷ್ಯರಿಗೆ ಸಾಮಾನ್ಯಗಳಾದ ಆವೇಶಗಳನ್ನು ಬಿಟ್ಟವಳಲ್ಲ. ಅವಳು ಘನವಂತೆ. ಆದರೆ, ಭವಭೂತಿಯ ಸೀತೆಯಂತೆ ಬರೇ ದೈವಿಕವಂಶದವಳಲ್ಲ. ತನ್ನ ದುರದೃಷ್ಟಕ್ಕಾಗಿ ಮಾತ್ರ ತಾನೆ ಬಂದು ದನ್ನು ಅನುಭವಿಸುವಳು. ತನಗೊದಗಿದ ಅನ್ಯಾಯಕ್ಕಾಗಿ "ಒಮ್ಮೆಯೇ ಅಪರಾಧಿನಿಯಲ್ಲದ ನನ್ನನ್ನು ನಿನ್ನ ಹೃದಯದಿಂದ ಮಾತ್ರವಲ್ಲದೆ ರಾಜ್ಯ

ದಿಂದಲೇ ತ್ಯಜಿಸುವುದು ಸರಿಯಾದುದಲ್ಲ"ವೆಂದು ಹೇಳಿಬಿಡುವಳು. ಆದರೆ ಅವಳ ಸಂದೇಶದ ಅಂತ್ಯಭಾಗವನ್ನು ಕೇಳಿದವರು ಯಾರಾದರೂ ಸರಿಯೆ, ಕಣ್ಣೀರನ್ನು ಸುರಿಸದೆ ಇರಲಾರರು. ಎಂತಹ ಕಷ್ಟಕಾಲದಲ್ಲಾದರೂ ಪತಿಯ ಮೇಲ್ಮೆಯ ಬಯಕೆಯು ಅವಳನ್ನು ಬಿಟ್ಟಿಲ್ಲ. ತನ್ನ ಗಂಡನು ಸಾಮ್ರಾಜ್ಯದೊಡೆಯನು. ಅರಮನೆಯಲ್ಲಿ ವಾಸಿಸುವಾಗಲೂ "ಪತ್ನಿಯಂತೆ ಕಷ್ಟಕಾಲದಲ್ಲಿ ಪಾಲುಗಾರರಾಗುವವರಾರು" ಎನ್ನುವಳು. ತಾನಿಲ್ಲದಾಗ ಆತನ ದೇಹದ ರಕ್ಷಣೆಯ ಜವಾಬ್ದಾರಿಕೆಯನ್ನು ನೀನೇ ವಹಿಸಿಕೊಳ್ಳಬೇಕೆಂದು ಲಕ್ಷ್ಮಣನೊಡನೆ ಕೇಳಿಕೊಳ್ಳುವಳು. ಅವಳ ಮನೋವೃತ್ತಿಯು ಹತ್ತು ವರುಷಗಳ ನಂತರವೂ ಒಂದೇ ರೀತಿಯಾಗಿರುವುದು. ಆದರೆ ಕಷ್ಟವನ್ನು ತಡೆಯಲಾರದೆ ಕೆಲವು ಬಾರಿ ನಂಬಲಾರದ ಗಂಡಸರ ಗಂಡೆದೆಯನ್ನು ದೂರುವಳು. ಆದರೆ ಒಡನೆಯೇ ರಾಮನು ತನಗಾಗಿ ಮಾಡಿದ ದಂಡಯಾತ್ರೆಯನ್ನು ನೆನೆಯುವಳು. ರಾಮನೊಂದಿಗೆ ಇದ್ದು ಅನುಭವಿಸಿದ ಸಂತೋಷಗಳ ಸ್ಮರಣೆಯು ಅವಳ ಹೃದಯವನ್ನು ಮತ್ತಷ್ಟು ಹೆಚ್ಚಿಸುವುದು. ಅವನ ಜೊತೆಯಲ್ಲಿ ಚಂದ್ರೋದಯವನ್ನು ಕಂಡಿದ್ದೆನು; ಕೋಗಿಲೆಯ ಕೂಗನ್ನು ಕೇಳಿದ್ದೆನು; ಮಲಯಾನಿಲಕ್ಕೆ ಸಂತೋಷಪಡುತ್ತಿದ್ದೆನು; ಇಂದು ನಾನೊಬ್ಬಳೇ ಇಲ್ಲಿ ನೋಡುವೆನು; ಕೇಳುವೆನು; ಸಂತೋಷಪಡುವೆನು ಎಂಬ ಮಾತುಗಳು ಸೀತೆಯ ಹೃದಯದಿಂದ ಹೊರಡುವುವು.

ವೇದವತಿಯು ಮಾತನಾಡುತ್ತ ರಾಮನು ತಪ್ಪಿತಸ್ಥನೆಂದು ಸಾಧಿಸುವಾಗ, ಸೀತೆಯು ಹಾಗಲ್ಲವೆಂದೂ, ಆತನು ನನ್ನನ್ನು ದೇಹದಿಂದ ಬಿಟ್ಟನೇ ಹೊರತು ಹೃದಯದಿಂದ ಬಿಟ್ಟಿಲ್ಲವೆಂದೂ; ಅವನು ನಿರಪರಾಧಿಯೆಂದೂ ಸಮರ್ಥಿಸುವಳು. ಈ ಸಂದರ್ಭವು ರೂಪಕದ ಜೀವಾಳದಂತೆ ಬಹುಪ್ರಾಮುಖ್ಯವಾಗಿರುವುದು. ಪುಷ್ಪಾಪಚಯಕ್ಕಾಗಿ ಲತಾಭವನದ ಮರೆಯಲ್ಲಿದ್ದ ಸೀತೆಯು ಅಕಸ್ಮಾತ್ತಾಗಿ ರಾಮನನ್ನು ನೋಡಿ ಹೇಳಿಕೊಳ್ಳುವ ಮಾತುಗಳು ಹೃದಯಂಗಮವಾದ ಭಾವನೋದ್ರೇಕವೇ ಸರಿ. ಸ್ತ್ರೀಯ ಹೆಮ್ಮೆಯೂ ಅತಿಯಾದ ಪ್ರೇಮವೂ ಸಾಮರಸ್ಯದಿಂದ ಬೆರೆತುದನ್ನು ನಾವಿಲ್ಲಿ ನೋಡಬಹುದು. ಅನೇಕ ವರುಷಗಳು ದಾಟಿಹೋದ ಮೇಲೆ ಉಂಟಾದ ರಾಮನ ಸಂದರ್ಶನವು ಅವಳಲ್ಲಿದ್ದ ವಿರಹವ್ಯಥೆಯನ್ನು ಹೊಡೆನೆಬ್ಬಿಸುವುದು. ರಾಮನು ಅರ್ಧ ಸ್ಮೃತಿಯಲ್ಲಿ ಅವಳೊಂದಿಗೆ ಮಾತಾಡುವನು. ಈ ದೃಶ್ಯದ ರಮಣೀಯತೆಯು ಅನಿರ್ವಚನೀಯವೇ ಸರಿ.

ಸೀತೆಯು ತನ್ನ ಅತ್ತೆಯಂದಿರಿಗೆ ಹೆಚ್ಚಿನ ಗೌರವವನ್ನು ಸಲ್ಲಿಸುವಳು. ಲಕ್ಷ್ಮಣನನ್ನು ಪುತ್ರಭಾವದಿಂದ ಕಾಣುವಳು. ಕೊನೆಯ ಪುನರ್ಮಿಲನವು ಕಳಂಕವಿಲ್ಲದ ಸೀತೆಯ ಪಾತ್ರವನ್ನು ಪ್ರಜ್ವಲಿಸುವಂತೆ ಮಾಡುವುದು. ಸಮಾಜಕ್ಕೆ ಆದರ್ಶಮಹಿಳೆಯಾಗಿ ಸೀತೆಯ ಪಾತ್ರವನ್ನು ಬಹು ಜಾಣ್ಮೆಯಿಂದ ರಚಿಸಿದ ಕವಿಯ ಜಾಣ್ಮೆಗೆ ಎಣೆಯಿಲ್ಲ

**ಲಕ್ಷ್ಮಣ**— ಇವನು ಹಿರಿಯಣ್ಣನ ಅಪ್ಪಣೆಗೆ ವಿಧೇಯನಾಗಿ ಮನಸ್ಸಿಗೆ ಅಸಮ್ಮತವಾದ ಕಾರ್ಯವನ್ನು ಕೈಗೊಳ್ಳಬೇಕಾಗುವುದು. ನಿರಪರಾಧಿನಿಯಾದ ಸೀತಾಮಾತೆಯನ್ನು ಗಂಗಾನದಿಯ ಸ್ನಾನಾದಿವಿಹಾರಕ್ಕೆಂದು ಕರೆದುಕೊಂಡು ಹೋಗಿ ಗೊಂಡಾರಣ್ಯದಲ್ಲಿ ಬಿಡುವಾಗ ಎಂತಹ ನಿಷ್ಠುರ ಹೃದಯವಾದರೂ ಒಡೆದು ಹೋಗಬೇಕಿತ್ತು. ತನ್ನ ಜೀವನದಲ್ಲಿ ಆಕೆಗಾಗಿ ಕಷ್ಟನಷ್ಟಗಳನ್ನು ಅನುಭವಿಸುತ್ತಿದ್ದವನು ವಿಚಾರವಿಲ್ಲದೆ ಹೇಗೆ ಬಿಟ್ಟು ಬರುವನೋ ಎಂದು ಪ್ರೇಕ್ಷಕರು ಭಾವಿಸುವಂತೆ ಸಂದರ್ಭವಿರುವುದು. ಆದರೆ, ಅಣ್ಣನ ಶಾಸನಕ್ಕೆ ಎದುರಾಡಲಾರದ ಸೋದರನು ಮಾಡುವುದೇನು? ವಿಷಣ್ಣನಾದ ಲಕ್ಷ್ಮಣನು ಗಂಗಾತೀರಕ್ಕೆ ಅತ್ತಿಗೆಯನ್ನು ಕೊಂಡೊಯ್ದು ಅರಸನ ಅಪ್ಪಣೆಯನ್ನು ಆಕೆಗೆ ತಿಳಿಸುವುದಕ್ಕಾಗಿ ಆಕೆಯೊಡನೆ ಹೃದಯವನ್ನು ದೃಢಪಡಿಸಿಕೊಳ್ಳುವಂತೆ ಬೇಡಿಕೊಳ್ಳುವನು. ಆಗಲೇ ಉಮ್ಮಳದಿಂದ ಆತನ ಕಂಠವು ಬಿಗಿದುಕೊಳ್ಳುವುದು. ಅಣ್ಣನಾಡಿದ ಮಾತುಗಳನ್ನು ಉಚ್ಚರಿಸಲು ಅಸಮರ್ಥನಾಗುವನು. ಕಡೆಗೆ ಕಣ್ಣೀರನ್ನು ತೊಡೆದು ತನ್ನೊಡೆಯನ ಮಾತುಗಳನ್ನು ಹೇಗೋ ತಿಳಿಸಿಕೊಳ್ಳುವನು. ಅದನ್ನು ಕೇಳಿ ಸೀತೆ ಮೂರ್ಛೆ ಹೊಂದುವಳು. ಮೈದುನನು ಭಯಾನ್ವಿತನಾಗಿ ನಿಲ್ಲುವನು. ಲಂಕೆಯ ಯುದ್ಧದಲ್ಲಿ ಕೊನೆಗೊಂಡಿದ್ದ ಈ ನಿರ್ಭಾಗ್ಯನನ್ನು ಹನುಮಂತನು ಬದುಕಿಸಿದುದು ಈ ಘೋರಕೃತ್ಯವನ್ನು ಮಾಡುವುದಕ್ಕಾಗಿಯೇ ಇರಬಹುದೆಂದು ತನ್ನ ಜನ್ಮವನ್ನು ನಿಂದಿಸಿಕೊಳ್ಳುವನು. ಬಳಿಕ ರಾಜಾಜ್ಞೆಗೆ ಕಟ್ಟುಬಿದ್ದ ನಿರ್ಜೀವನ ಗೊಂಬೆಯಂತೆ ಲಕ್ಷ್ಮಣನು ಕಾಡಿನಲ್ಲಿ ಸಂಧ್ಯಾಕಾಲಕ್ಕೆ ಅವಳನ್ನು ಬಿಡುವಾಗ ಆವೇಶಗೊಂಡ ಪ್ರೇಕ್ಷಕರು ಆತನನ್ನು ಶಪಿಸದಿದ್ದರೆ ಆತನ ಭಾಗ್ಯವೆಂದು ತೋರುವುದು. ಅಂತೂ ಅವಳನ್ನು ಬಿಡುವಾಗ ವೈಯಕ್ತಿಕಸ್ವಾತಂತ್ರ್ಯದಿಂದ ಆತನು ಗಂಗಾಮಾತೆ, ವನದೇವತೆ, ಅಷ್ಟದಿಕ್ಪಾಲಕರು ಋಷಿಗಣ ಮೊದಲಾದವರೊಡನೆ "ಮಾತೆಯನ್ನು ಕಾಯ್ದುಕೊಳ್ಳಬೇಕೆ"ಂದು ಬೇಡಿಕೊಳ್ಳುವುದು ಹೃದಯದ್ರಾವಕವಾಗಿ ಅಯ್ಯೋ

ಎನಿಸುವುದು. ಹೀಗೆ ಅಣ್ಣನ ಆಜ್ಞೆಯನ್ನು ನೆರವೇರಿಸಿದರೂ ತಾನು ಮಾಡಿದುದು ಕೇವಲ ತಪ್ಪೆಂದು ಅವನ ಮನಸ್ಸು ಸದಾ ಕುದಿಯುತ್ತಿತ್ತು. ನೈಮಿಷಾರಣ್ಯದ ಮಾರ್ಗದಲ್ಲಿ ಅಣ್ಣನನ್ನು ಕರಕೊಂಡು ಹೋಗುವಾಗ "ಅಂದಪರಾಧನೊಂದಿನಿಸುಮಿಲ್ಲದೊಡಂ" ಎಂದು ಹೇಳಿಕೊಳ್ಳುವುದು ಮಾತ್ರವಲ್ಲದೆ, ತನ್ನ ಜನ್ಮವನ್ನೇ ನಿಂದಿಸಿಕೊಂಡು ತಾನು ಕುಲಕ್ಕೆ ಅಂಗಾರಕನೆಂದು ಭಾವಿಸಿಕೊಳ್ಳುವನು. ಅಣ್ಣನಿಗೆ ಜೀವನದ ಸಂಗಾತಿಯಾಗಿ ಯಾವಾಗಲೂ ಅವನನ್ನು ಸಮಾಧಾನಪಡಿಸುವುದರಲ್ಲೇ ಮಗ್ನನಾಗುವನು. ಕುಶಲವರು ರಾಮಾಯಣವನ್ನು ಹಾಡುವಾಗ, ಸೀತಾಪರಿತ್ಯಾಗದ ಸಂದರ್ಭವು ಕೇಳಿಸಿದೊಡನೆ ನಿರ್ಜೀವಿಯಂತಾಗುವನು. ಪುನರ್ಮಿಲನದ ವೇಳೆಗೆ ಪಕ್ಕನೆ ಸಂತೋಷದಿಂದ 'ಅಪರಾಧಿಯಾದ ಲಕ್ಷ್ಮಣನು ನಮಸ್ಕರಿಸುವನು' ಎಂದು ಹೇಳುತ್ತ ಸೀತೆಯ ಪಾದಗಳಿಗೆ ಎರಗುವನು. ಸೀತಾರಾಮರಿಬ್ಬರಿಗೂ ಅವನ ಮೇಲೆ ಹೆಚ್ಚಿನ ಮಮತೆಯು. ವತ್ಸನೆಂದೇ ಅವನು ಕರೆಯಲ್ಪಡುವನು. ಅವನ ಅಭಿಪ್ರಾಯವು ಮಾನ್ಯವಾಗುವುದು. ಅಣ್ಣನಲ್ಲಿ ಅಚಲ ವಿಶ್ವಾಸವಿಟ್ಟು ಕಾರ್ಯವನ್ನು ನಿರ್ವಹಿಸುವ ಲಕ್ಷ್ಮಣನಂತಹ ತಮ್ಮಂದಿರನ್ನು ಪಡೆಯಲು ಶ್ರೀರಾಮನಂತಹ ಮಹಾಪುರುಷರಿಗೇ ಸಾಧ್ಯವು. ಪೂಜ್ಯರಲ್ಲಿ ಭಕ್ತಿ, ಸೋದರವಾತ್ಸಲ್ಯ, ಮಾತೃಭಕ್ತಿ ಮೊದಲಾದ ಗುಣಗಳಿಂದ ಲಕ್ಷ್ಮಣನ ಪಾತ್ರವನ್ನು ಕಲ್ಪಿಸಿದ ದಿಙ್ನಾಗನಿಗೆ ಸಮಾಜವು ಚಿರಋಣಿಯಾಗಿರಬೇಕು.

**ವಾಲ್ಮೀಕಿ**— ಇವನು ಲಕ್ಷ್ಮಣನ ಕೇಳಿಕೆಯಂತೆ ರಂಗವನ್ನು ಪ್ರವೇಶಿಸುವನೆಂಬ ಹಾಗೆ ಭಾಸವಾಗುವುದು. ರಾಮನ ಆಡಳಿತೆಯಲ್ಲಿ ಅಬಲೆಯೊಬ್ಬಳಿಗೆ ಒದಗಿದ ಸಂಕಷ್ಟಗಳನ್ನು ನೋಡಿ ಆಶ್ಚರ್ಯಚಕಿತನಾಗುವನು. ರಾಮನಿಂದಲೇ ಕಷ್ಟಕ್ಕೀಡಾದವಳೆಂದು ತಿಳಿದೊಡನೆ ತಾನು ಅವಳಿಗಾಗಿ ಮರುಗುವುದು ಸರಿಯಲ್ಲವೆಂದೇ ಭಾವಿಸುವನು. ಇದರಿಂದ ರಾಮನು ಧರ್ಮಾತ್ಮನೆಂಬ ವಿಚಾರವು ಸರ್ವರಲ್ಲಿಯೂ ನೆಲಸಿದ್ದಿತೆಂಬುದು ಸ್ಪಷ್ಟವಾಗುವುದು. ತನ್ನ ಸ್ನೇಹಿತನಾದ ಜನಕರಾಯನ ಮಗಳು, ದಶರಥ ಮಹಾರಾಜನ ಸೊಸೆ, ಸೀತೆ ಎಂದು ತಿಳಿದಕೂಡಲೆ ಚಿಂತಿಸುತ್ತ ಯೋಗದ ಬಲದಿಂದ ಸೀತೆಯ ಚರಿತ್ರೆಯನ್ನು ತಿಳಿದುಕೊಂಡು ಲೋಕಕ್ಕೆ ವಾಲ್ಮೀಕಿಯಾದರೂ ಸೀತೆಗೆ ತಂದೆಯಂತೆ ಆಶ್ರಯಕೊಡುವನು. ಆ ಕಾಲದ ಪ್ರಸಿದ್ಧ ಮಹರ್ಷಿಗಳಲ್ಲಿ ವಾಲ್ಮೀಕಿಯೊಬ್ಬನಾಗಿದ್ದನು. ಆತನಿಗೆ ಗಂಗಾತೀರದಲ್ಲೊಂದು; ಗೋಮತೀತೀರದಲ್ಲಿ ಇನ್ನೊಂದು; ಹೀಗೆ ಎರಡು ಆಶ್ರಮ

ಗಳಿದ್ದುವು. ಅವನು ರಾಮಾಯಣವನ್ನು ರಚಿಸಿದ ಆದಿಕವಿಯು. ರಾಮ ಲಕ್ಷ್ಮಣ ಕುಶಲವರು ಪರಸ್ಪರ ಪರಿಚಯ ಮಾಡಿಕೊಂಡು ಸಂತೋಷಾಧಿಕ್ಯ ದಿಂದ ಮೂರ್ಛೆಹೋಗಿ ಬಿದ್ದವೇಳೆಗೆ ಸೀತೆಯನ್ನು ಕರಕೊಂಡು ಪ್ರವೇಶಿಸು ವನು. ಅವನು ತನ್ನ ಸ್ಥಾನದ ನೆಲೆಯನ್ನು ಸರಿಯಾಗಿ ತಿಳಿದವನು. ಆಗ ಸೀತೆಯು ತಾನು ರಾಮನನ್ನು ನೋಡುವುದು ಸರಿಯೆ? ಅಗೋಚರತ್ವವು ತನ್ನಲ್ಲಿರುವುದಿಲ್ಲವೆ? ಅವನು ನನ್ನನ್ನು ತ್ಯಾಜ್ಯಮಾಡಿಲ್ಲವೆ ಎಂದು ಸಂದೇಹ ಪಡುವಳು. ಆಗ ವಾಲ್ಮೀಕಿಯು ನಾಸಿರುವಾಗ ನೀನು ಗಂಡನನ್ನು ನಿರ್ಭಯವಾಗಿ ನೋಡಬಹುದು ಎನ್ನುವನು. ವಾಲ್ಮೀಕಿಗೆ ರಾಮನ ಮೇಲೆ ರಾಜನೆಂಬ ಗೌರವವಿರುವುದು ನಿಜ. ಆದರೆ ನಿರಪರಾಧಿನಿಯ ಮೇಲೆ ಆತನು ತೋರಿಸಿದ ಕ್ರೌರ್ಯಕ್ಕಾಗಿ ರಾಮನನ್ನೂ ಕೋಪದಿಂದ ಗದರಿಸುವನು. ಕುಶಲವರು ರಾಮನನ್ನು ನೋಡಿದೊಡನೆ ತಂದೆಯೇ ರಕ್ಷಿಸೆಂದು ಕಂಬನಿ ಸುರಿಸುವುದನ್ನು ನೋಡಿ ಮಕ್ಕಳನ್ನು ಬೆದರಿಸುವನು; ಗರ್ವೋಕ್ತಿಗಳಿಂದ ರಾಮನನ್ನು ವಿರೋಧಿಸುವನು; ಅತ್ಯಧಿಕವಾದ ಕೋಪದೊಡನೆ ರಾಮನಲ್ಲಿ ಪ್ರೇಮವಿಲ್ಲವೆಂದು ಸಾಧಿಸುವನು; ಇವೆಲ್ಲವೂ ವಾಲ್ಮೀಕಿಯಲ್ಲಿರುವ ಶಕ್ತಿ ಯನ್ನು ಸ್ಫುಟಗೊಳಿಸುತ್ತಿವೆ. ಭಾವೀಅಧಿಕಾರಿಗಳಾಗತಕ್ಕ ಕುಶಲವರನ್ನು ಯೋಗ್ಯರೀತಿಯ ವಿದ್ಯಾಭ್ಯಾಸಾದಿಗಳಿಂದ ಕಾಪಾಡಿದ ಉತ್ತಮಶಿಕ್ಷಕನು ವಾಲ್ಮೀಕಿಯು. ಅಂತಹ ಶಿಕ್ಷಕನಿಗೆ ಹಿಂದೂದೇಶದಲ್ಲಿ ಎಂತಹ ಸ್ಥಾನ ಮಾನಗಳಿದ್ದುವೆಂಬುದನ್ನು ಕವಿಯು ಇಲ್ಲಿ ಸರಿಯಾಗಿ ಚಿತ್ರಿಸಿರುವುದನ್ನು ಕಾಣುವೆವಲ್ಲವೆ?

**ಕುಶಲವರು**—ಇವರಿಬ್ಬರೂ ವಿಶೇಷವೇನೂ ಅರಿಯದ ಬಾಲಕರು. ಆದರೂ ಸಮಾಜದಲ್ಲಿ ವರ್ತಿಸತಕ್ಕ ರೀತಿನೀತಿ ನಡೆನುಡಿ ಮೊದಲಾದುವು ಗಳನ್ನು ಸರಿಯಾಗಿ ತಿಳಿದಿದ್ದರು.

**ವೇದವತಿ**—ಇವಳು ಸೀತೆಯ ಕಷ್ಟಕಾಲದಲ್ಲಿ ಸಂಗಾತಿಯಾಗಿರು ವಳು. ಬಗೆಬಗೆಯ ಪ್ರಶ್ನೆಗಳಿಂದ ಸೀತೆಯ ಹೃದಯವನ್ನು ತಿಳಿದು ಕೊಳ್ಳುವಳು. ಒಳಗೊಳಗೇ ಆಕೆಗಾಗಿ ಮರುಗುತ್ತ ಬೇಗನೆ ಸುದಿನವು ಬರುವುದೆಂದು ಗೆಳತಿಯನ್ನು ಸಮಾಧಾನಪಡಿಸುವಳು. ಈ ಪಾತ್ರದ ಮೂಲಕವೇ ಸೀತೆಯ ಯೋಗ್ಯತೆಯು ಸ್ಫುಟಹೊಂದುವುದು.

**ಕಥೆಯ ಕಾಲವಿಚಾರ**—ಸೀತಾಪರಿತ್ಯಾಗದಿಂದ ಪ್ರಾರಂಭವಾಗಿ ಹತ್ತು ವರುಷಗಳ ವರೆಗಿನ ಕಥೆಯು ಕುಂದಮಾಲೆಯಲ್ಲಿ ತೋರಿಬರುವುದು.

ಐದನೇ ಅಂಕದಲ್ಲಿ ವಿದೂಷಕನು ಸೀತೆಯನ್ನು ಪರಿತ್ಯಾಗಮಾಡಿ ಇಂದಿಗೆ ಹತ್ತು ವರುಷಗಳಾದುವು ಎನ್ನುವನು. ಮೊದಲನೆಯ ಅಂಕವು, ಲಕ್ಷ್ಮಣನು ಸೀತೆಯನ್ನು ಕಾಡಿಗೆ ಕರೆದುಕೊಂಡು ಹೋಗುವಲ್ಲಿಂದ ಪ್ರಾರಂಭವಾಗಿ ಆ ದಿನ ಸಂಜೆಗೆ ಆತನಲ್ಲಿಂದ ಮರಳಿ ಬರುವ ತನಕ ಒಂದು ದಿನದ ಕಥಾಭಾಗ ವನ್ನೊಳಗೊಂಡಿರುವುದು. ಎರಡನೆಯ ಅಂಕವು, ಸೀತೆಯ ವಿರಹವ್ಯಥೆಯ ಸಂಪೂರ್ಣಾವಧಿಯ ವರೆಗೂ ಇರುವುದು. ರಾಮನ ಯಜ್ಞಕ್ಕೆ ಸಕಲ ಸನ್ನಾಹಗಳೂ ಸಿದ್ಧವಾಗಿವೆ. ನೈಮಿಷಾರಣ್ಯದಲ್ಲಿ ನಡೆಯತಕ್ಕ ಯಜ್ಞಕ್ಕೆ ವಾಲ್ಮೀಕಿಮುನಿಯು ಆಶ್ರಮವಾಸಿಗಳೊಂದಿಗೆ ಬರಬೇಕೆಂದು ರಾಮ ದೂತನು ಕರೆಯಲು ಬಂದಿರುವನು. ಎಂಬಲ್ಲಿಯ ತನಕವೂ ಹರಡಿದೆ. ಮೂರನೆಯ ಅಂಕವು ಮುಂಜಾವದಲ್ಲಿ ಪ್ರಾರಂಭವಾಗಿ ಅದೇ ದಿನ ಸಂಜೆಗೆ ಅಂತ್ಯವಾಗುವ ಹಾಗಿದೆ. ಮೂರನೆಯ ಅಂಕಕ್ಕೂ ನಾಲ್ಕನೆಯ ಅಂಕಕ್ಕೂ ಐದು ದಿವಸಗಳ ಅಂತರವಿರುವುದು. ಕುಶಲವರೊಡನೆ ಸೀತೆಯು ನೈಮಿ ಷಾರಣ್ಯವನ್ನು ಪ್ರವೇಶಿಸಿದ ಏಳನೆಯ ದಿನ; ರಾಮನು ನೈಮಿಷಕ್ಕೆ ಬಂದ ಆರನೆಯ ದಿನ; ನಾಲ್ಕನೆಯ ಅಂಕವು ಮೂರನೆಯ ಅಂಕವು ಕಳೆದ ಐದು ದಿವಸಗಳ ಮೇಲೆ ಪ್ರಾರಂಭವಾಗಿ ಪ್ರಾತಃಕಾಲದಿಂದ ಸಂಜೆಯ ವರೆಗೆ ಮಾತ್ರವಿದ್ದು ಸೂರ್ಯಾಸ್ತಮಾನದ ವರ್ಣನೆಯನ್ನೊಳಗೊಂಡಿರುವುದು. ಐದನೆಯ ಅಂಕವು ಪೂರ್ವಾಹ್ನದ ಸಂಧ್ಯಾವಂದನೆಯಾದ ಮೇಲೆ ಪ್ರಾರಂಭ ವಾಗುವುದು. ಐದನೆಯ ಮತ್ತು ಆರನೆಯ ಅಂಕಗಳು ಕೆಲವೇ ಘಂಟೆ ಗಳಲ್ಲಿ ಎಂದರೆ ಸುಮಾರು ಒಂದು ಹೊತ್ತಿನಲ್ಲೇ ಮುಗಿಯುವಂತಿರುವುವು. ರಾಮಾಯಣಗಾನವು ಮಧ್ಯಾಹ್ನ ಸ್ನಾನದ ಮೊದಲೇ ಅಂತ್ಯವಾಗಬೇಕೆಂದು ಋಷಿಯ ಹೇಳಿಕೆಯಿಂದ ತಿಳಿದುಬರುವುದು.

**ಈ ರೂಪಕದಲ್ಲಿ ಪ್ರತಿಬಿಂಬಿಸಿ ತೋರುವ ಕವಿಕಾಲದ ಸಮಾಜ**— ಎಲ್ಲಾ ದೃಶ್ಯಕಾವ್ಯಗಳ ಹಾಗೆಯೇ ಇಲ್ಲಿಯೂ ಸಮಾಜವು ಚಿತ್ರಿತವಾಗಿರು ವುದು. ಪರಾಮರ್ಶಿಸುವಾಗ ಬ್ರಾಹ್ಮಣ್ಯದ ಪುನರುಜ್ಜೀವನಕಾಲದಲ್ಲಿ ಕವಿಯು ಜೀವಿಸುತ್ತಿದ್ದಂತೆ ತಿಳಿಯುವುದು. ಬ್ರಾಹ್ಮಣರಿಗೆ ಮುಖ್ಯಸ್ಥಾನವು ಸಲ್ಲುತ್ತಿತ್ತು. ಅರಸರು ಅವರನ್ನು ಗೌರವಿಸುತ್ತಿದ್ದರು. ಕುಶಲವರು ರಾಮನಿಗೆ ನಮಸ್ಕಾರಮಾಡಲು ಬ್ರಾಹ್ಮಣರು ತನಗೆ ನಮಸ್ಕರಿಸಿದರೆಂದು ಅವನು ಚಿಂತೆಗೊಳಗಾಗುವನು. ಬ್ರಾಹ್ಮಣರ ಸೌಕರ್ಯಕ್ಕಾಗಿ ರಾಜನ ಪ್ರಯತ್ನಗಳು ನಡೆಯುತ್ತಿದ್ದುವು. ಸಾಧುಸಂತರು ಪೂಜ್ಯರಾಗಿದ್ದರು.

ಸಮಾಜದ ಅಭಿವೃದ್ಧಿಗೆ ಅವರು ಕೈದೀವಿಗೆಗಳಂತಿದ್ದರು, ಅವರ ತಪೋ ಬಲವು ಅವರ್ಣನೀಯವಾಗಿತ್ತು. ಅವರಲ್ಲಿ ಶ್ರೇಷ್ಠರೆನಿಸಿದ್ದ ವಾಲ್ಮೀಕಿ, ವಿಶ್ವಾಮಿತ್ರ, ವಸಿಷ್ಠ ಮೊದಲಾದವರು ಅಂತರ್ದೃಷ್ಟಿಯುಳ್ಳವರು ಗೋಮಾತೆ ಯನ್ನು ಪೂಜಿಸುತ್ತಿದ್ದರು. ಮೋಕ್ಷವನ್ನು ಸಾಧಿಸುವುದೇ ಮುಖ್ಯೋದ್ದೇಶ ವಾಗಿತ್ತು.

ಸ್ತ್ರೀಯರು ತಮ್ಮ ಪತಿಗಳೊಂದಿಗೆ ಯಜ್ಞದಲ್ಲಿ ಭಾಗವಹಿಸುತ್ತಿದ್ದರು. ಆದರೂ ಅವರ ಸ್ಥಾನವು ಹೇಗಿತ್ತೆಂಬುದಕ್ಕೆ "ಅಬಲೆಯರು" ಎಂಬ ರೂಢಿಯೇ ಸಾಕ್ಷಿಯಾಗಿದೆ. ಅವರು ಅತಿಥಿಗಳ ಮುಂದೆ ಘೋಷೆಗಳನ್ನು ಉಪ ಯೋಗಿಸುತ್ತಿದ್ದರು. ಪುಂಸವನ ಮೊದಲಾದ ವೈದಿಕಕಾರ್ಯಗಳನ್ನು ತಪ್ಪದೆ ನಡೆಯಿಸುತ್ತಿದ್ದರು. ಮರಣಾನಂತರ ಮಹನೀಯರ ಶಿಲಾಪ್ರತಿಮೆ ಗಳನ್ನು ಮಾಡಿ ಇರಿಸುವ ಪದ್ಧತಿಯಿತ್ತು. ಇಡೀ ನಾಟಕದಲ್ಲಿ ಹಿಂದೂ ಮತವಲ್ಲದೆ ಇತರ ಮತಗಳ ಸೂಚನೆಯೇ ಕಂಡುಬರುವುದಿಲ್ಲ.

**ಅಂದಿನ ಧಾರ್ಮಿಕ ರೀತಿ**—ದಿಙ್ನಾಗನ ಕಾಲದಲ್ಲಿ ಪೌರಾಣಿಕ ಹಿಂದೂಮತವು ಪ್ರಬಲವಾಗಿತ್ತು. ಜನರಲ್ಲಿ ಅವತಾರಗಳ ಭಾವನೆಯು ಬೇರೂರಿದ್ದಿರಬೇಕು. ರಾಮನು ವಿಷ್ಣುವಿನ ಅವತಾರವೆಂದೇ ಭಾವಿಸಿದ್ದರು. ಅವನನ್ನು ಆದಿಪುರುಷನೆಂದೂ ಸರಸಿರುಹನಾಭನೆಂದೂ ಮಧುಸೂದನ ನೆಂದೂ ಕರೆಯುತ್ತಿದ್ದರು. ಗಂಗಾನದಿಯನ್ನು ಗಂಗಾಮಾತೆ, ಭಾಗೀರಥಿ, ಜಾಹ್ನವಿ, ಜಹ್ನುತನಯೆ ಮೊದಲಾದ ಹೆಸರುಗಳಿಂದ ಕರೆಯುತ್ತಿದ್ದರು. ಅದು ಪಾಪವನ್ನು ಪರಿಹರಿಸುವುದೆಂಬ ನಂಬಿಕೆಯು ನೆಲಸಿತ್ತು. ಶಿವನ ತಲೆಯಿಂದ ಇಳಿದುಬಂದವಳೆಂದು ಆ ನದಿಗೆ ಕಾಣಿಕೆಗಳನ್ನು ಸಮರ್ಪಣೆ ಮಾಡುವ ಪದ್ಧತಿಯಿತ್ತು. ಸಮುದ್ರಮಥನ, ಶೇಷನು ತನ್ನ ಹೆಡೆಗಳಲ್ಲಿ ಭೂಮಿಯನ್ನು ಹೊತ್ತಿರುವುದು ಮುಂತಾದ ಪೌರಾಣಿಕ ಕಥೆಗಳಲ್ಲಿ ವಿಶ್ವಾಸ ವುಳ್ಳವರಾಗಿದ್ದರು. ಈಶ್ವರನು ಶಂಭು, ಶಿವ, ಮಹೇಶ್ವರ ಮೊದಲಾದ ಹೆಸರುಗಳಿಂದ ಕರೆಯಲ್ಪಡುತ್ತಿದ್ದನಲ್ಲದೆ ಉಮೆಯೊಡನಿದ್ದು ಚಂದ್ರನನ್ನು ತಲೆಯಲ್ಲಿ ಧರಿಸಿದವನೆಂದೂ ಸಂಭಾವ್ಯನಾಗಿದ್ದನು. ವಿಘ್ನೇಶ್ವರನ ಪೂಜೆಯು ನೆಲಸಿದ್ದಿತು. ಇಂದ್ರನನ್ನು ಪುರಂದರ, ಜಂಭಾರಿ ಮೊದಲಾದ ಅನ್ವರ್ಥ ನಾಮಗಳಿಂದ ಕರೆಯುತ್ತಿದ್ದರು. ವೇದ, ಯಜ್ಞ, ಹೋಮಧೂಮ, ಅಗ್ನಿ ಮೊದಲಾದುವುಗಳೂ ಅಲ್ಲಲ್ಲಿ ತೋರಿಬರುತ್ತಿವೆ.



# ಕುಂದಮಾಲೆಯು ಕಥಾಸಂಗ್ರಹ

**ಮೊದಲನೆಯ ಅಂಕದಲ್ಲಿ**— ಗಂಗಾತೀರದ ಅರಣ್ಯದಲ್ಲಿ ಸಾರಥಿ ಯೊಂದಿಗೆ ಸೀತಾಲಕ್ಷ್ಮಣರು ಪ್ರವೇಶಿಸುವರು. ಭಾಗೀರಥೀಸ್ನಾನಕ್ಕಾಗಿ ಬಂದಿರುವೆನೆಂದು ತಿಳಿದುಕೊಂಡಿದ್ದ ಸೀತೆಯೊಡನೆ ಲಕ್ಷ್ಮಣನು ನಿಜಾಂಶ ವನ್ನು ತಿಳಿಸುವನು. ಆ ಗರ್ಭಿಣಿಯು ಆತ್ಮಹತ್ಯೆಮಾಡಿಕೊಳ್ಳದ ಹಾಗೆ ಬೇಡಿಕೊಂಡು ಲಕ್ಷ್ಮಣನು ಆಕೆಯ ರಕ್ಷಣೆಗಾಗಿ ಭಾಗೀರಥಿ ವನದೇವತೆ ದಿಕ್ಪಾಲಕ ಮುನಿವೃಂದ ಮೊದಲಾದವರನ್ನು ಪ್ರಾರ್ಥಿಸಿಕೊಂಡು ಅರಣ್ಯ ಮಧ್ಯದಲ್ಲಿ ಆಕೆಯೊಬ್ಬಳನ್ನೇ ತೊರೆದು ಆತನು ಸಂಜೆಗೆ ಹಿಂತಿರುಗುವನು. ಆಗ ವಾಲ್ಮೀಕಿಯು ಪ್ರವೇಶಿಸಿ ಯೋಗಪ್ರಭಾವದಿಂದ ಆಕೆಯ ನಿಜಸಂಗತಿ ಯನ್ನರಿತು ಅವಳನ್ನು ತನ್ನ ಆಶ್ರಮಕ್ಕೆ ಕರಕೊಂಡು ಹೋಗುವನು.

**ಎರಡನೆಯ ಅಂಕದಲ್ಲಿ**— ಕುಶಲವರ ಜನನ ಅವರ ಯೋಗ್ಯತೆ ವಿದ್ಯಾಭ್ಯಾಸ ಮೊದಲಾದ ಅಂಶಗಳೂ, ರಾಮನು ಅಶ್ವಮೇಧದೀಕ್ಷಿತಾಳಿ ದುದೂ, ವಾಲ್ಮೀಕಿಯ ಆಶ್ರಮಕ್ಕೆ ರಾಜದೂತನು ಬಂದು ತಾಪಸರೆಲ್ಲರನ್ನೂ ಯಾಗಕ್ಕೆ ಕರೆದ ಸಂಗತಿಯೂ ಮುನಿಕನ್ಯೆಯರ ಪ್ರವೇಶರೂಪವಾದ ಪ್ರವೇ ಶಕದಿಂದ ತಿಳಿದುಬರುವುದು. ವಿರಹವ್ಯಥೆಯನ್ನು ಸಹಿಸಲಾರದೆ ಆತ್ಮ ಹತ್ಯೆಗೆ ಮನಸ್ಸುಮಾಡುತ್ತಿದ್ದ ಸೀತೆಯನ್ನು ವೇದವತಿಯೆಂಬ ಸಖಿಯು ಸಂತೈಸುವಳು. ವಾಲ್ಮೀಕಿಯು ಪರಿವಾರಸಮೇತನಾಗಿ ರಾಮನ ಯಜ್ಞಕ್ಕೆ ಹೊರಡುವನು.

**ಮೂರನೆಯ ಅಂಕದಲ್ಲಿ**— ತಾಪಸನ ಪ್ರವೇಶಾತ್ಮಕವಾದ ಪ್ರವೇಶಕ ದಿಂದ ಸೌಮಿತ್ರಿಯು ವಾಲ್ಮೀಕಿಯ ಆಶ್ರಮಮಾರ್ಗವಾಗಿ ಯಜ್ಞವು ನಡೆಯ ಲಿರುವ ನೈಮಿಷಾರಣ್ಯಕ್ಕೆ ರಾಮನನ್ನು ಕರೆತರುವನೆಂಬ ವಿಷಯವು ತಿಳಿದು ಬರುವುದು. ಗೋಮತೀನದಿಯ ದಂಡೆಯಲ್ಲಿ ಸಂಚರಿಸುತ್ತಿದ್ದ ರಾಮ ಲಕ್ಷ್ಮಣರಿಗೆ ಅಲೆಗಳು ಕೊಚ್ಚಿಕೊಂಡು ಬಂದ ವಿಚಿತ್ರ ಬಂಧವಿನ್ಯಸ್ತವಾದ ಕುಂದಮಾಲೆಯು ಗೋಚರಿಸುವುದು. ಅದು ಸೀತೆಯಿಂದಲೇ ಗ್ರಥಿತ ವಾದುದೆಂದು ರಾಮನು ಊಹಿಸುವನು. ವಾಲ್ಮೀಕಿಯ ಆಶ್ರಮದ ಪರಿ ಸರ; ರಾಮನ ವಿರಹ; ಪುಷ್ಪಾಪಚಯಕ್ಕಾಗಿ ಬಂದ ಸೀತೆಯು ಮರೆಯ ಲ್ಲಿದ್ದುಕೊಂಡು ರಾಮನನ್ನು ನೋಡಿ ಮರುಗುವುದು; ರಾಮನ ಪ್ರಲಾಪ

ಮೊದಲಾದ ವರ್ಣನೆಗಳಾದ ಮೇಲೆ ವಾಲ್ಮೀಕಿಯ ಶಿಷ್ಯನು ಬಂದು ಗುರು ಸಂದರ್ಶನಕ್ಕೆ ಈ ಮಧ್ಯಾಹ್ನವೇ ಸರಿಯಾದ ವೇಳೆಯೆಂದು ತಿಳಿಸಿದ ಮೇರೆಗೆ ರಾಮಲಕ್ಷ್ಮಣರು ವಾಲ್ಮೀಕಿಯ ಭೇಟಿಗಾಗಿ ಹೊರಟು ಹೋಗುವರು.

**ನಾಲ್ಕನೆಯ ಅಂಕದಲ್ಲಿ** — ರಾಮನಿಗೆ ಸೀತೆಯಲ್ಲಿರುವ ಅನುರಾಗವನ್ನು ಪರೀಕ್ಷಿಸುವುದಕ್ಕಾಗಿ ಅಪ್ಸರಸೆಯಾದ ತಿಲೋತ್ತಮೆಯು ಸೀತಾವೇಷದಿಂದ ರಾಮನನ್ನು ಮರುಳುಗೊಳಿಸಬೇಕೆಂದಿರುವ ಸಂಗತಿಯು ಸೀತೆಯ ಸಖಿಯರಾದ ವೇದವತಿಯಜ್ಞವೇದಿಯರ ಪ್ರವೇಶರೂಪವಾದ ಪ್ರವೇಶಕದಿಂದ ತಿಳಿದುಬರುವುದು. ಬಳಿಕ ಉತ್ತರೀಯಯುಗಲಧಾರಿಣಿಯಾದ ಸೀತೆಯು ಯಜ್ಞವೇದಿಯೊಡನೆ ಪ್ರವೇಶಿಸಿ ತನ್ನ ವಿರಹ ವೇದನೆಯನ್ನು ಪ್ರಕಟಿಸಿಕೊಳ್ಳುವಳು. ರಾಮಕಣ್ವರ ಪ್ರವೇಶದೊಡನೆ ಪವಿತ್ರವಾದ ನೈಮಿಷಾರಣ್ಯದ ವರ್ಣನೆಯಾಗುವುದು. ಬಳಿಕ ವಾಲ್ಮೀಕಿಯ ಪ್ರಭಾವದಿಂದ ಅದೃಶ್ಯೆಯಾಗಿ ಸಂಚರಿಸುತ್ತಿದ್ದ ಸೀತೆಯ ಪ್ರತಿಬಿಂಬವನ್ನು ತೀರದಲ್ಲಿದ್ದ ರಾಮನು ಸರೋವರದ ನೀರಲ್ಲಿ ಕಾಣುವನು. ಇನ್ನೂ ಕೆಲವು ಕಾರಣಗಳಿಂದ ಆಕೆ ಬದುಕಿರುವುದು ನಿಶ್ಚಯವೆಂದು ರಾಮನು ತಿಳಿದುಕೊಳ್ಳುವನು. ತಿಲೋತ್ತಮೆಯ ರಹಸ್ಯವಾದ ಉದ್ದೇಶವನ್ನು ವಿದೂಷಕನು ಬಂದು ರಾಮನಿಗೆ ತಿಳಿಸುವನು.

**ಐದನೆಯ ಅಂಕದಲ್ಲಿ** — ನೈಮಿಷಾರಣ್ಯ. ವಿದೂಷಕನ ಮಾತಿನಿಂದ ಸೀತೆಯು ಬದುಕಿರುವ ವಿಚಾರದಲ್ಲಿ ರಾಮನ ಮನಸ್ಸು ಚಂಚಲವಾಗುವುದು. ವಾಲ್ಮೀಕಿಯ ಆಜ್ಞೆಯ ಮೇರೆಗೆ ಕುಶಲವರು ರಾಮನ ಸಾನ್ನಿಧ್ಯವನ್ನು ಸೇರುವರು. ಅವರೊಂದಿಗೆ ರಾಮನು ನಾನಾವಿಧವಾಗಿ ಮಾತನಾಡುವನು. ಅವರ ವಿಷಯವಾಗಿ ರಾಮನ ಮನಸ್ಸು ಆತುರಪಡುವುದು. ಮಾತನಾಡುವುದರಲ್ಲೇ ಕಾಲಕಳೆಯುತ್ತಿದ್ದ ಬಾಲಕರನ್ನು ಉಪಾಧ್ಯಾಯದೂತನು ಕಾರ್ಯತತ್ಪರರಾಗುವ ಹಾಗೆ ತ್ವರೆಗೊಳಿಸುವನು.

**ಆರನೆಯ ಅಂಕದಲ್ಲಿ** — ಕಂಚುಕಿಯು ಪ್ರವೇಶಿಸಿ ನಡೆಯಲಿರುವ ರಾಮಾಯಣಗಾನಕ್ಕಾಗಿ ಸಭೆಯು ಸೇರಿರುವುದೆಂದು ತಿಳಿಸುವನು. ರಾಮಲಕ್ಷ್ಮಣರು ಬಂದು ಪೀಠವನ್ನಲಂಕರಿಸುವರು. ಕುಶಲವರ ರಾಮಾಯಣಗಾನವು ಸೀತಾಪರಿತ್ಯಾಗದ ವರೆಗೂ ನಡೆದು ಕೊನೆಗೊಳ್ಳುವುದು. ಆ ಬಳಿಕ ಕಣ್ವನು ಬಂದು ಸೀತೆಯ ಸಮಾಚಾರವನ್ನು ತಿಳಿಸುವನು. ಕುಶಲವರು

ತನ್ನ ಮಕ್ಕಳೆಂದು ತಿಳಿದೊಡನೆ ರಾಮನು ಮೂರ್ಛೆಗೊಳ್ಳುವನು. ಅಲ್ಲಿಗೆ ವಾಲ್ಮೀಕಿಯು ಸೀತಾಸಮೇತನಾಗಿ ಬಂದು ಸಂತೈಸುವನು. ಸೀತೆಯ ಪ್ರಾರ್ಥನೆಯಂತೆ ಭೂದೇವಿಯು ಪ್ರತ್ಯಕ್ಷಳಾಗಿ ಸೀತೆಯ ಪರಿಶುದ್ಧತೆಯನ್ನು ಪ್ರಕಾಶಪಡಿಸುವಳು. ಕೊನೆಗೆ ರಾಮನು ಸೀತೆಯನ್ನು ಸ್ವೀಕರಿಸುವನು. ಲಕ್ಷ್ಮಣನ ಬೇಡಿಕೆಯಂತೆ ಕುಶನಿಗೆ ಪಟ್ಟವಾಗುವುದು. ಲವನು ಯುವ ರಾಜನಾಗುವನು. ಭರತವಾಕ್ಯದೊಂದಿಗೆ ಕುಂದಮಾಲೆಯು ಕೊನೆಗೊಳ್ಳುವುದು.



# ಪಾತ್ರಗಳ ವಿವರ



| | | | |
|---|---|---|---|
| | ಸೂತ್ರಧಾರ | ... | |
| 1. | ರಾಮ | ... | ಕಥಾನಾಯಕ. |
| 2. | ಲಕ್ಷ್ಮಣ | ... | ರಾಮನ ತಮ್ಮ. |
| 3. | ಸೀತೆ | ... | ಕಥಾನಾಯಕಿ. |
| 4. | ಸುಮಂತ್ರ | ... | ಸೀತೆಯನ್ನೊಯ್ದ ರಥದ ಸಾರಥಿ. |
| 5. | ವಾಲ್ಮೀಕಿ | ... | ಕುಲಪತಿ (ರಾಮಾಯಣ ಕರ್ತೃ) ಆದಿಕವಿ. |
| 6. | ಬಾದರಾಯಣ | ... | ವಾಲ್ಮೀಕಿಯ ಶಿಷ್ಯ. |
| 7. | ಕಣ್ವ | ... | ರಾಮನ ಸಹಪಾಠಿ (ವಾಲ್ಮೀಕಿಯ ಶಿಷ್ಯ). |
| 8. | ವಿದೂಷಕ | ... | ರಾಮನ ನರ್ಮಸಚಿವ. |
| 9. | ವೇದವತಿ | ... | ಸೀತೆಯ ಗೆಳತಿ (ಮುನಿಕನ್ಯೆ). |
| 10. | ಯಜ್ಞವೇದಿ | ... | ಮುನಿಕನ್ಯೆ. |
| 11. | ಕುಶಲವರು | ... | ರಾಮನ ಮಕ್ಕಳು. |
| 12. | ಪೃಥಿವೀ ದೇವಿ | ... | ಸೀತೆಯ ತಾಯಿ. |
| 13. | ಕಂಚುಕಿ | ... | ರಾಮನ ಪರಿಜನ. |
| 14. | ಸಖಿಯರು | ... | ಪೃಥಿವೀದೇವಿಯ ಗೆಳತಿಯರು. |



## ಮಹಾಕವಿ ದಿಙ್ನಾಗವಿರಚಿತ

# ಕುಂದಮಾಲೆ

## (ಪ್ರಥಮಾಂಕಂ)

---

ಕಂದ ॥ ಆರಯ್ಯೆಂದೆರಗಿದ ಜಂ
ಭಾರಿಯ ಮಂದಾರಮಾಲಿಕಾಮಧುಮಧುರಂ ।
ಪೀರುಗೆ ಮಿಗೆ ವಿಘ್ನಾಂಬುಧಿ
ವಾರಿಯನಾಗಣಪಚರಣಧೂಲೀನಿಕರಂ ॥ ೧ ॥

(ನಾಂದಿಯ ಬಳಿಕ ಸೂತ್ರಧಾರನು ಪ್ರವೇಶಿಸುವನು)

ಸೂತ್ರಧಾರ— ॥ ಚಂಪಕಮಾಲೆ ॥
ಪರಿಣತಿಗೊಂಡ ಚಿತ್ತದೆ ಧಗದ್ಧಗಮೆಂಬ ತಪೋಗ್ನಿಯಂತೆ ಮುಂ
ಬರಿವ ಸುರಾಪಗೋರ್ಮಿಭುಜಗಂಗಳ ಹುತ್ತದ ಕಾಂತಿಯಂತೆವೊಲ್ ।
ನೆರೆದ ಮೃಣಾಲಕೋಮಲಕಲಾನಿಧಿ ಪೊರ್ದಿದ ಸಂಧ್ಯೆಯಂದದಿಂ
ಮೆರೆವರುಣಾಂಶುಪಿಂಗಲಮುಮೇಶಕಪರ್ದಮೆ ನಿಮ್ಮನೋವುಗುಂ ॥೨॥

ಅಯ್ಯಾ, ಸಭೆಯು ನನ್ನನ್ನು ಕರೆದು ಹೀಗೆ ಆಜ್ಞಾಪಿಸಿರುವುದು— "ಆರಾರಾಲಪುರವಾಸಿಯಾದ ಪೂಜ್ಯದಿಙ್ನಾಗನು ಬರೆದ ಕುಂದಮಾಲೆಯೆಂಬ ನಾಟಕವಿರುವುದು. ಅದನ್ನು ನೀನೀಗಲೇ ಆಡಿ ತೋರಿಸಬೇಕು" ಎಂದು. ಆದುದರಿಂದ ಆ ರೂಪಕವನ್ನು ಅಭಿನಯಿಸಿ ತೋರಿಸಲು ಬೇಕಾದಂತೆ ಸಹಾಯಮಾಡತಕ್ಕವಳಾದ ಆರ್ಯೆಯನ್ನು ಕರೆದು ರಂಗಭೂಮಿಗೆ ಹೋಗುವೆನು.

(ತೆರೆಯಲ್ಲಿ)

ಆರ್ಯೆ, ಇಲ್ಲೀ ಇಳಿಯಬೇಕಾಗಿದೆ!

ಸೂತ್ರಧಾರ—ಓಹೋ! ಇದೇನು? "ಆರ್ಯೆ" ಎಂದು ಹೇಳುತ್ತ ನನಗೆ ಸಹಾಯಮಾಡುತ್ತಿರುವವರು ಯಾರಾಗಿರಬಹುದು? (ನೋಡಿ) ಆಹಾ! ಕಷ್ಟವೇ! ಇದು ಮನಮರುಕದ ದೃಶ್ಯವು—

ಕಂದ ॥ ದುರುಳನ ಲಂಕೆಯೊಳಿರ್ದಾ
ಧರಣಿಜೆಯಂ ತೊರೆಯನೆಂಬ ಲೋಕೋಕ್ತಿಗೆ ನೊಂ- ।
ದರಸಂ ದೇಶದೆ ಪೊರಮಡಿ
ಸಿರಿ ಗರ್ಭಿಣಿಯಂ ವನಕ್ಕೆ ಲಕ್ಷ್ಮಣನುಯ್ವಂ ॥ ೩ ॥

(ಎಂದು ಹೊರಟು ಹೋಗುವನು)

## ಇಂತಿದು ಸ್ಥಾಪನೆ

(ಬಳಿಕ ರಥದಲ್ಲಿ ಕುಳಿತು ಸೀತೆಯೂ ಸಾರಥಿಯಾದ ಸುಮಂತ್ರನೂ ಲಕ್ಷ್ಮಣನೂ ಪ್ರವೇಶಿಸುವರು.)

ಲಕ್ಷ್ಮಣ—ಆರ್ಯೆ, ಇಲ್ಲೇ ಇಳಿಯಬೇಕಾಗಿದೆ. ದಟ್ಟವಾಗಿ ಬೆಳೆದ ಗಿಡಬಳ್ಳಿಗಳ ಪೊದರುಗಳು ತಡೆಯುತ್ತಿರುವುದರಿಂದ ಭಾಗೀರಥೀತೀರದ ಈ ವನಪ್ರದೇಶಗಳು ರಥಸಂಚಾರಕ್ಕೆ ಯೋಗ್ಯವಲ್ಲ. ಆದುದರಿಂದ ಇಲ್ಲೇ ಇಳಿಯಬೇಕಾಗಿದೆ.

ಸೀತೆ—ವತ್ಸ ಲಕ್ಷ್ಮಣ, ಕುದುರೆಗಳು ಬಹುಬೇಗನೆ ಓಡಿ ಬಂದುದರಿಂದ ನನ್ನ ಅಂಗಾಂಗಗಳು ನಡುಗುತ್ತಿವೆ. ಎದ್ದು ನಿಲ್ಲುವುದಕ್ಕೂ ತ್ರಾಣವಿಲ್ಲದಿರುವಾಗ ನಾನು ಇಳಿಯುವುದೆಂದರೇನು?

ಲಕ್ಷ್ಮಣ—ಸುಮಂತ್ರ, ಕುದುರೆಗಳನ್ನು ತಡೆದು ನಿಲ್ಲಿಸಲು ಪ್ರಯತ್ನ ಮಾಡಬಹುದಲ್ಲವೆ?

ಸುಮಂತ್ರ—ಗಾಂಧರ್ವಪ್ರಿಯಗಳೆನಿಸಿರುವ ಈ ಕುದುರೆಗಳು ನನ್ನ ಯತ್ನವನ್ನು ಮಿಕ್ಕಿರುವುವು. ಆದುದರಿಂದ—

ಕಂದ ॥ ಕಲಹಂಸರುತಂ ಶ್ರವಣಾಂ
ಜಲಿಪುಟಮಂ ಪುಗುಪುಗುತ್ತೆ ಮನಮಂ ಸೆಳೆಯಲ್ ।
ಚಲದಿಂದೋಡುವ ಘೋಟಕ
ಬಲಮಂ ಪ್ರಗ್ರಹದಿನೆಳೆದು ನಿಲ್ಲಿಸಲಾರೆಂ ॥ ೪ ॥

ಲಕ್ಷ್ಮಣ—ಸುಮಂತ್ರ, ಕುದುರೆಗಳು ಬಹುವೇಗವಾಗಿ ಓಡುತ್ತಿರುವುದರಿಂದ ಎತ್ತರತಗ್ಗುಗಳ ಲಕ್ಷ್ಯವಿಲ್ಲದೆ ರಥವನ್ನು ಗಂಗೆಯ ಮಡುವಿನಲ್ಲಿ ಕೆಡಹಬಹುದು. ಆದುದರಿಂದ ಹೇಗಾದರೂ ಪ್ರಯತ್ನಮಾಡಬೇಕು.

ಸುಮಂತ್ರ—(ಕಡಿವಾಣವೆಳೆಯುವುದನ್ನು ಅಭಿನಯಿಸುವನು).

ಲಕ್ಷ್ಮಣ— ಈಗ ರಥವು ನಿಂತಿತು. ಆದುದರಿಂದ ದೇವಿಯು ಇಳಿಯ ಬಹುದು.

ಸೀತೆ—(ಇಳಿದು ಅತ್ತಿತ್ತ ಮೆಲ್ಲನೆ ಸಂಚರಿಸುವಳು)

ಲಕ್ಷ್ಮಣ— ಸುಮಂತ್ರ, ಈ ಕುದುರೆಗಳು ಬಹುದೂರ ಓಡಿ ಬಂದು ದರಿಂದ ಬಳಲಿರುವುವು. ಅವುಗಳನ್ನು ವಿಶ್ರಾಂತಿಗೊಳಿಸು.

ಸುಮಂತ್ರ—ಅಪ್ಪಣೆಯಂತೆ. (ಎಂದು ರಥವೇರಿ ತೆರಳುವನು)

ಲಕ್ಷ್ಮಣ—(ಅತ್ತಿತ್ತ ಸಂಚರಿಸುತ್ತ ಸ್ವಗತಂ) ಆರ್ಯನು, ಅಲ್ಲ ಸ್ವಾಮಿಯು ಹೀಗೆ ಆಜ್ಞಾಪಿಸಿರುವನು—"ವತ್ಸ ಲಕ್ಷ್ಮಣ, ರಾವಣನ ಲಂಕೆಯಲ್ಲಿದ್ದು ದರಿಂದ ಸೀತಾದೇವಿಯ ನಡತೆಯ ಕುರಿತು ಪುರಜನರ ಟೀಕೆಟಿಪ್ಪಣಿಗಳು ಕೇಳಿಬರುತ್ತಿವೆ. ಸೀತಾಂಗನೆಯ ಸಲುವಾಗಿ ಶರಚ್ಚಂದ್ರನಿರ್ಮಲವಾದ ಇಕ್ಷ್ವಾಕುವಂಶಕ್ಕೆ ಕಲಂಕವನ್ನು ಉಂಟುಮಾಡಲೊಲ್ಲೆನು. ಸೀತೆಯಾ ದರೋ ಗರ್ಭಿಣೀಭಾವಸುಲಭವಾದ ಬಯಕೆಯಿಂದ ಗಂಗೆಯನ್ನು ನೋಡಿ ಬರಬೇಕೆಂದು ಬೇಡಿಕೊಂಡಿರುವಳು. ಆದುದರಿಂದ ಅವಳನ್ನು ನೀನು ಭಾಗೀರಥೀದರ್ಶನವ್ಯಾಜದಿಂದ ಸುಮಂತ್ರಾಧಿಷ್ಠಿತವಾದ ರಥದಲ್ಲಿ ಕರೆ ದುಯ್ದು ಯಾವುದಾದರೊಂದು ಅಡವಿಯಲ್ಲಿ ಬಿಟ್ಟುಬಾ" ಎಂದು. ಅದಕ್ಕಾಗಿ ನಾನು ಸ್ವಜನವೆಂಬ ಭರವಸೆಯಿಂದ ಸಂದೇಹಪಡದಿರುವ ದೇವಿಯನ್ನು, ಸಾಕಿದ ಹುಲ್ಲೆಯನ್ನು ವಧ್ಯಭೂಮಿಗೆ ಕೊಂಡೊಯ್ಯುವಂತೆ ಗೊಂಡಾರಣ್ಯಕ್ಕೆ ಕರತರುತ್ತಿರುವೆನು.

ಸೀತೆ— ವತ್ಸ ಲಕ್ಷ್ಮಣ, ಗರ್ಭಭಾರವನ್ನು ಹೊತ್ತ ಆಯಾಸದಿಂದ ನನ್ನ ಕಾಲುಗಳು ಕುಸಿಯುತ್ತಿರುವುವು. ಆದುದರಿಂದ ನೀನು ಮುಂದೆ ಹೋಗಿ ಗಂಗಾನದಿಯು ಇನ್ನೆಷ್ಟು ದೂರದಲ್ಲಿರಬಹುದೆಂದು ತಿಳಿಸು.

ಲಕ್ಷ್ಮಣ— ದಿವ್ಯಾಪಗೆಯು ಸಮೀಪದಲ್ಲೇ ಇರುವುದು. ಚಿಂತಿಸ ದಿರು. ನಾವು ಸಮೀಪಕ್ಕೇ ಬಂದುಬಿಟ್ಟೆವು. ನೋಡು—

॥ ಮಾಲಿನಿ ॥

ಸರಸಿಜಮಧುಗಂಧಂದಾಳ್ದು ಮುಂದೊತ್ತುವಾಗಳ್
ಗುರುತರಕಲಹಂಸಸ್ವಾನಮಾಧುರ್ಯಮೊಂದಲ್ ।
ಪರಿವ ವರತರಂಗಾರ್ದ್ರಂ ಕರಂ ದೇವಿ ನಿನ್ನಂ
ಪರಿಚರಿಸಲೆನಲ್ಗಂಗಾನಿಲಂ ಬೀಸುತಿರ್ಕುಂ ॥ ೫ ॥

ಸೀತೆ—(ಸ್ಪರ್ಶಸುಖವನ್ನು ಅಭಿನಯಿಸಿ) ಈಗ ಜನನಿಯ ಕರಸ್ಪರ್ಶದಂತೆ ಸುಖಶೀತಲವಾದ ಗಂಗಾತರಂಗಮಾರುತಸ್ಪರ್ಶದಿಂದ ಪರಿಶ್ರಮದೊಡನೆ ಪಾಪವೂ ಪರಿಹಾರವಾಯಿತು. ಆದರೂ ದೋಹದಕುತೂಹಲವು ಗಂಗೆಯಲ್ಲಿ ಇಳಿದು ಸ್ನಾನಮಾಡಬೇಕೆಂದು ನನ್ನನ್ನು ಪ್ರೋತ್ಸಾಹಿಸುತ್ತಿರುವುದು. ಆದುದರಿಂದ ದಾರಿನಡೆದು ಬಳಲಿದ ನಾನು ಈ ಮಡುವಿನಲ್ಲಿ ಇಳಿದು ಸ್ನಾನಮಾಡಬಹುದಾದ ದಾರಿಯನ್ನು ತೋರಿಸು.

ಲಕ್ಷ್ಮಣ—(ಸರಿಯಾಗಿ ದೃಷ್ಟಿಸಿ ನೋಡಿ) ಇಲ್ಲಿ ಜನಸಂಚಾರವು ಬಹು ವಿರಳವಾಗಿರುವುದರಿಂದ ಇದು ಹೆಚ್ಚು ಆಳವಾದ ಮಡುವಾಗಿರಬೇಕು. ಆದರೆ, ಇಲ್ಲೊಂದು ನೀವಾರಲತೆಯಿರುವುದು. ಇಲ್ಲಿಯೇ ಮುಂಗಾಲನ್ನು ಸರಿಯಾಗಿ ಊರಿಕೊಂಡು—

ಕಂದ ॥ ಎಡಗೈಯ್ಯಿಂದೀಲತೆಯಂ
ಪಿಡಿಯುತೆ ಬಲಗೈಯನೂರಿ ಮೊಣಕಾಲೊಳ್ನೀಂ ।
ನಡುಗದೆ ನಡೆತರುತುಂ ಮುಂ
ದಡಿಯಿಡುತಿರ್ಪೆನ್ನ ಪಜ್ಜೆಯನುಸರಿಸಾರ್ಯೆ ॥ ೬ ॥

ಸೀತೆ—(ಹಾಗೆಯೇ ಇಳಿದು ಸ್ನಾನಮಾಡಿ ಮೇಲಕ್ಕೆ ಬಂದು) ವತ್ಸ, ಅತಿಯಾಗಿ ಬಳಲಿರುವೆನು. ಆದುದರಿಂದ ಈ ಮರದ ಕೆಳಗೆ ಕುಳಿತು ಸ್ವಲ್ಪ ವಿಶ್ರಮಿಸಿಕೊಳ್ಳುವೆನು.

ಲಕ್ಷ್ಮಣ—ದೇವಿಯ ಇಷ್ಟದಂತಾಗಲಿ!

ಸೀತೆ—(ಕುಳಿತು ದಣಿವಾರಿಸಿಕೊಳ್ಳುವಳು)

ಲಕ್ಷ್ಮಣ—ಆಶ್ಚರ್ಯವೇ! ಭಾಗ್ಯಶಾಲಿಗಳು ಹೋದಲ್ಲೆಲ್ಲಾ ಪರಿವಾರವು. ಅದು ಹೇಗೆಂದರೆ—

॥ ಶಾರ್ದೂಲ ವಿಕ್ರೀಡಿತ ॥

ಗಂಗಾತೋಯತರಂಗಮಿಲ್ಲಿ ನಲವಿಂ ತಂಗಾಳಿಯಂ ಬೀಸುಗುಂ
ಸಂಗೀತಾಮೃತಸಾರಮಂ ನೆರೆಯಿಕುಂ ಕೂಗುತ್ತೆ ಕಾದಂಬಮುಂ ।
ತುಂಗಾನೋಕಹದಿಂದೆ ತಣ್ಣೆಳಲೆ ಬಂದಾಲಿಂಗಿಕುಂ ನೋಡೆ ನಿ
ಸ್ಸಂಗತ್ವಾಟವಿಯಲ್ಲಿಯುಂ ಪರಿಜನೌಘಂ ದೇವಿಗಿರ್ಕುಂ ವಲಂ ॥ ೭ ॥

ಸೀತೆ—ವತ್ಸನು ಹೇಳಿದಂತೆಯೇ ಸರಿ. ಇಲ್ಲಿ ಕುಳಿತಿರುವಾಗ ಸ್ವಜನರ ಮಧ್ಯದಲ್ಲಿರುವಂತೆಯೇ ನನ್ನ ಹೃದಯಕ್ಕೆ ಸುಖಾನುಭವವುಂಟಾಗುತ್ತಿದೆ.

ಲಕ್ಷ್ಮಣ—(ಸ್ವಗತಂ) ದೇವಿಯು ವಿಶ್ರಾಂತಿಪಡೆದು ಸುಖವಾಗಿ ಕುಳಿತಿರುವಳು. ನಿಜವಾದ ಸಂಗತಿಯನ್ನು ಅರಿಕೆಮಾಡಿಕೊಳ್ಳಲು ಇದೇ ತಕ್ಕ ಸಮಯವು. (ಪ್ರಕಾಶಂ ಪಕ್ಕನೆ ಚರಣಗಳಿಗೆ ಎರಗಿ) ನಿರಂತರಪ್ರವಾಸದುಃಖ ಭಾಗಿಯೆನಿಸಿ ಲಕ್ಷಣಹೀನನಾದ ಈ ಲಕ್ಷ್ಮಣನು ಬಿನ್ನೈಸಿಕೊಳ್ಳುವನು. ಮನಸ್ಸನ್ನು ದೃಢಪಡಿಸಿಕೊಳ್ಳಬೇಕು.

ಸೀತೆ—(ಸಂಭ್ರಮದೊಡನೆ) ಆರ್ಯಪುತ್ರನಿಗೆ ಕುಶಲವಷ್ಟೆ?

ಲಕ್ಷ್ಮಣ—(ವನವನ್ನು ತೋರಿಸುತ್ತ) ಸ್ಥಿತಿಯು ಹೀಗಿರುವಲ್ಲಿ ಆರ್ಯನಿಗೆ ಕುಶಲವೆಂದರೇನು?

ಸೀತೆ—ಮತ್ತೊಮ್ಮೆ ಕೈಕಾಮ್ಮನವರು ವನವಾಸದಲ್ಲಿ ನಿಯೋಗಿಸಿದರೆ?

ಲಕ್ಷ್ಮಣ—ವನವಾಸವು ನಿಯುಕ್ತವಾಗಿರುವುದು. ಆದರೆ ಜನನಿಯಿಂದಲ್ಲ.

ಸೀತೆ—ಮತ್ತಾರಿಂದ?

ಲಕ್ಷ್ಮಣ—ಆರ್ಯನಿಂದ.

ಸೀತೆ—ಹೇಗೆ ವಿಧಿಸಲಾಯಿತು?

ಲಕ್ಷ್ಮಣ—(ಕಂಬನಿಯೊರಸುತ್ತ)

**ಕಂದ** ॥ ಆರ್ಯನ ಶಾಸನಮಿಂತನಿ
ವಾರ್ಯಮೆನುತ್ತದನೆ ಯತ್ನದಿಂದಂ ಪೇಳ- ।
ಲ್ಕಾರ್ಯೇ ತೊಡಗಲ್ಬಾರತಿ
ಕಾರ್ಯಾಂತರಮಗ್ನೆಯಂತೆ ಮನಮಂ ತಡೆಗುಂ ॥ ೮ ॥

ಸೀತೆ—ಏನು! ನನಗೆ ವನವಾಸವನ್ನು ವಿಧಿಸಿದನೆ?

ಲಕ್ಷ್ಮಣ—ನಿಮಗೆ ಮಾತ್ರವಲ್ಲ; ತನಗೂ ಕೂಡ.

ಸೀತೆ—ಅದು ಹೇಗೆ?

ಲಕ್ಷ್ಮಣ— ॥ **ಮತ್ತೇಭವಿಕ್ರೀಡಿತ** ॥

ಅದು ಸನ್ಮಿತ್ರರ ಕೂಟಮಂ ನೆರಪಲೆಂದಾತ್ಮೀಯತಾಭಾವಕಾ
ಸ್ಪದಮಂತಾಹಿತಯಾಗವಹ್ನಿಯ ನಿವಾಸಂ ಯುಕ್ತಭೋಗಂ ವಲಂ ।
ಅದುವೇ ರಮ್ಯಮೆನಿಪ್ಪ ರಾಜಗೃಹದಲ್ಲಾರ್ಯಂ ನಿವಾಸಿಪ್ಪೊಡಂ
ಸದಯಂಗಂ ವನವಾಸಮಲ್ಲಮೆ ಭವತ್ಕಾಂತಾರಸಂಚಾರದೊಳ್ ॥ ೯ ॥

ಸೀತೆ—ವತ್ಸ, ಸ್ಪಷ್ಟವಾಗಿ ಹೇಳು. ಈಗ ನನಗೆ ವನವಾಸವೋ? ಆರ್ಯನಿಗೋ?

ಲಕ್ಷ್ಮಣ—ಮಂದಭಾಗ್ಯನಾದ ನಾನು ಇನ್ನೇನೆಂದು ಹೇಳಲಿ?

ಕಂದ ॥ ಪೊಡವಿಪನಾರ್ಯಂ ನಿನ್ನಂ
ನಡತೆಯ ಗುಣಪಕ್ಷಪಾತದಿಂದಂ ತೊರೆದಂ ।
ಅಡವಿಯೊಳಿಲ್ಲಿಯೆ ಬಿಡುತಂ
ನಡೆಯಲ್ವೇಳ್ಕುಂ ದಲಾನುಮಣ್ಣನ ಬಳಿಗಂ ॥ ೧೦ ॥

ಸೀತೆ—ಹಾ ತಾತ! ಆರ್ಯ ಕೋಸಲಾಧಿಪ! ಈಗ ನೀವು ಇಲ್ಲದೆ ಹೋದಿರಿ! (ಎಂದು ಮೂರ್ಛೆಹೊಂದುವಳು.)

ಲಕ್ಷ್ಮಣ—(ಸಂಭ್ರಮದೊಡನೆ) ಹಾ ಕಷ್ಟವೇ! ಬರಸಿಡಿಲ ಹೊಡೆತದಂತೆ ದಾರುಣವಾದ ಈ ಪರಿತ್ಯಾಗವಾರ್ತಾಶ್ರವಣದಿಂದ ದೇವಿಯ ಪ್ರಾಣಗಳು ಹಾರಿಹೋದುವು. (ಪರೀಕ್ಷಿಸಿನೋಡಿ) ದೈವಯೋಗದಿಂದ ಉಸಿರಾಡುವುದು. ಈ ಮೋಹವನ್ನು ನಿವಾರಿಸಲಿರುವ ಪ್ರತಿಕ್ರಿಯೆಯೇನು? (ವ್ಯಸನದೊಡನೆ ನೋಡುತ್ತ) ಆಶ್ಚರ್ಯವೇ ಸರಿ—

॥ ಉಪಜಾತಿ ॥

ಸುರಾಪಗಾಶೀಕರಶೀತಲಾನಿಲಂ
ಬರುತ್ತೆ ಸಂಸೇವಿಸೆ ಮೆಲ್ಲನೀಗಳ್ ।
ನಿರೀಕ್ಷಿಸಲ್ಕೆನ್ನಯೆ ಭಾಗ್ಯಶೇಷದಿಂ
ಮರಲ್ದು ಬಂದಂತೆಯೆ ಪ್ರಜ್ಞೆಗೊಂಡಳ್ ॥ ೧೧ ॥

ಸೀತೆ—ವತ್ಸ ಲಕ್ಷ್ಮಣ, ಹೊರಟುಹೋದೆಯಾ?

ಲಕ್ಷ್ಮಣ—ಅಪ್ಪಣೆಯಾಗಲಿ! ಇನ್ನೂ ಈ ಮಂದಭಾಗ್ಯನು ಇಲ್ಲಿರುವನು.

ಸೀತೆ—ನಾನು ಯಾವ ದೋಷಕ್ಕಾಗಿ ಪರಿತ್ಯಕ್ತಳಾದೆನು?

ಲಕ್ಷ್ಮಣ—ದೇವಿಯಲ್ಲಿ ದೋಷವಿರುವುದೇ?

ಸೀತೆ—ನನ್ನ ದುರದೃಷ್ಟವನ್ನು ಎಷ್ಟು ನಿಂದಿಸಿದರೂ ಸಾಲದು. ದೋಷಲೇಶವಿಲ್ಲದೆಯೂ ಪರಿತ್ಯಕ್ತಳಾದೆನೆ? ವತ್ಸ, ನನಗೆ ಆರ್ಯನ ಸಂದೇಶವೇನಾದರೂ ಇರುವುದೆ?

ಲಕ್ಷ್ಮಣ—ಹೌದು.

ಸೀತೆ—ಅದೇನು ? ಹೇಳು.

ಲಕ್ಷ್ಮಣ— ॥ ಚಂಪಕಮಾಲೆ ॥

ಇನಿಯಳೆ ನೀಂ ಸಮಾನಗುಣವಂಶಸಮುದ್ಭವೆಯೆಂಬುದಂ ಮನ
ಕ್ಕನುಮತೆಯಾಗಿ ದುಃಖಸುಖದೊಳ್ಸಹವಾಸಿನಿಯೆಂಬುದಂ ಚಿರಂ ।
ನೆನೆಯೆನೆ ರಾಜನಾಗಿ ಜನದೊಂದು ದುರುಕ್ತಿಗೆ ನಿನ್ನನಟ್ಟಿದೆಂ
ಮನಸಿನ ಕೋಪಕಲ್ತು ಜನಕಾತ್ಮಜೆ ಕೋಮಲೆ ಹೇ ಗುಣೋನ್ನತೇ ।೧೨॥

ಇದು ಆರ್ಯನ ಸಂದೇಶವು.

ಸೀತೆ—ಏನು ? ಜನಾಪವಾದಭಯದಿಂದಲೋ ? ನನ್ನ ಮೇಲೆ ಬಂದಿರುವ ಜನಾಪವಾದವೇನು ?

ಲಕ್ಷ್ಮಣ—ಆರ್ಯೆಯನ್ನು ದೂಷಿಸುವುದೆಂದರೇನು ?

ಕಂದ ॥ ಪಿರಿದೆನೆ ಮಹರ್ಷಿಸಂಘಂ
ಪರಿವೃತದಿಕ್ಪಾಲವೃಂದಮಾರ್ಯನುಮಾನುಂ ।
ಪರಿಕಿಸೆ ಪಾವಕನಿಂದಂ
ಪರಿಶುದ್ಧಳೆ ! ಅಪ್ಪೊಡಂ . . . .

ಸೀತೆ—(ಲಜ್ಜೆಯೊಡನೆ) “ಅಪ್ಪೊಡಂ” ಎಂದರೇನು ಹೇಳು.

ಲಕ್ಷ್ಮಣ— . . . . ಜಗಂ ಸ್ವಚ್ಛಂದಂ ॥ ೧೩ ॥

ಸೀತೆ—ಅಗ್ನಿಶುದ್ಧಿಯ ವಿಚಾರದಿಂದ ಲಂಕಾನಿವಾಸವು ನೆನಪಿಗೆ ಬಂದು ಇನ್ನಷ್ಟು ಮರುಗಿಸುತ್ತಿದೆ. ಸೀತೆಯ ವಿಷಯದಲ್ಲಿಯೂ ಲೋಕಾಪವಾದವೆಂದರೆ, ಇಂತಹ ಸ್ತ್ರೀಜನ್ಮಕ್ಕೆ ಧಿಕ್ಕಾರವಿರಲಿ ! ಹೀಗೂ ನನ್ನನ್ನು ಪರಿತ್ಯಾಗಮಾಡಿದನೆ ? ನಾನಂತೂ ಪರಿತ್ಯಕ್ತಳಾದೆನೆ ? ಆರ್ಯಪುತ್ರನು ಪರಿತ್ಯಾಗಮಾಡಿದ ಈ ದೇಹವನ್ನು ನಾನಾದರೂ ತೊರೆಯುವುದು ಯೋಗ್ಯವಲ್ಲವೆ ? ಅಥವಾ ಹಾಗೆ ಮಾಡುವುದು ಸರಿಯಲ್ಲ. ಯಾಕೆಂದರೆ, ನಿರ್ದಯನಾದ ಆತನಿಗೆ ಸಮಾನವಾದ ಪ್ರಸವವನ್ನು ಹಾರೈಸುತ್ತ ಅಪವಾದವೆಂಬ ಕಂಟಕವು ನಾಟಿದ ಈ ಜೀವನವನ್ನು ಹೇಗಾದರೂ ನಿರ್ವಹಿಸುವೆನು.

ಲಕ್ಷ್ಮಣ—ಅನುಗೃಹೀತನಾದೆನು. (ಎದ್ದುನಿಂತು ಕೈಮುಗಿದು) ಆರ್ಯನ ಸಂದೇಶವಿನ್ನೊಂದಿರುವುದು.

ಸೀತೆ—ಅದೇನು ?

ಲಕ್ಷ್ಮಣ— ॥ ಉತ್ಪಲಮಾಲೆ ॥

ದೇವಿ! ಹೃದಂತರಾಳನಿಹಿತಾಪರದೇವತೆ ನೀನೆ ನಿಶ್ಚಯಂ
ಭಾವಿಸಿ ಬಂದ ನಿದ್ರೆಯೊಳೆ ಕಂಡ ಮನಸ್ಸಿನ ಚೆನ್ನೆಯುಂ! ಭವ- ।
ದ್ಭಾವನೆಯಲ್ಲದನ್ಯರ ನಿರೀಕ್ಷಿಸದಿರ್ಪೆನಗಿಂತು ಧರ್ಮಮುಂ
ಕೇವಲಮಲ್ತು ನಿನ್ನಪ್ರತಿಮೂರ್ತಿಯೆ ಯಾಗದ ಧರ್ಮಪತ್ನಿಯುಂ ॥೧೪॥

ಸೀತೆ—ತನ್ನ ಅಂತರಂಗವನ್ನು ಪ್ರಕಟಿಸಿಕೊಂಡ ಈ ಸಂದೇಶದ ಮೂಲಕ ಆರ್ಯಪುತ್ರನು ಪರಿತ್ಯಾಗದುಃಖವನ್ನು ಸಂಪೂರ್ಣವಾಗಿ ಪರಿಹರಿಸಿದನು. ಪತಿಯು ಅನ್ಯಾಸಕ್ತನಾಗಿ ಸತಿಗೆ ದುಃಖವನ್ನು ಉಂಟುಮಾಡುವ ಹಾಗೆ ಸತಿಯು ಅನ್ಯಾಸಕ್ತಳಾಗಿ ಪತಿಗೆ ವ್ಯಸನವನ್ನು ಉಂಟುಮಾಡಲಾರಳು.

ಲಕ್ಷ್ಮಣ—ದೇವಿಯ ಪ್ರತಿಸಂದೇಶವೇನು?

ಸೀತೆ—ಯಾರಿಗೆ?

ಲಕ್ಷ್ಮಣ—ಆರ್ಯನಿಗೆ.

ಸೀತೆ—ಈ ಸ್ಥಿತಿಯಲ್ಲಿ ಪ್ರತಿಸಂದೇಶವೆ? ನಮ್ಮ ಅತ್ತೆಯಂದಿರಿಗೆ ಪಾದವಂದನೆಯೊಡನೆ ನನ್ನ ಮಾತುಗಳಿಂದ ವಿಜ್ಞಾಪಿಸಿಕೊಳ್ಳಬೇಕು— "ಕ್ರೂರಜಂತುಗಳಿಂದ ನಿಬಿಡವಾದ ಗೊಂಡಾರಣ್ಯದಲ್ಲಿ ಅನಾಥೆಯಾಗಿ ಜೀವಿಸುತ್ತಿದ್ದರೂ ನನ್ನನ್ನು ಹಿರಿಯರಾದ ನೀವೆಲ್ಲರೂ ಹೃತ್ಪೂರ್ವಕವಾಗಿ ಅನುಗ್ರಹಿಸಬೇಕು" ಎಂದು.

ಲಕ್ಷ್ಮಣ—ಈ ಆಜ್ಞೆಯನ್ನು ಶಿರಸಾವಹಿಸಿದೆನು. ಆದರೆ ಅಣ್ಣನೊಡನೆ ಏನೆಂದು ವಿಜ್ಞಾಪಿಸಿಕೊಳ್ಳಲಿ?

ಸೀತೆ—ಅಂತಹ ನಿಷ್ಠುರಚಿತ್ತನಿಗೆ ಪ್ರತಿಸಂದೇಶದ ಅಗತ್ಯವಿಲ್ಲ. ಆದರೆ, ವತ್ಸ! ನೀನು ಹೀಗೆ ನಿರಾತಂಕವಾಗಿ ಹೇಳುತ್ತಿರುವುದು ನನ್ನ ದೌರ್ಭಾಗ್ಯವೇ ಸರಿ. ಆದುದರಿಂದ—"ಈ ಮಂದಭಾಗಿನಿಯನ್ನು ಕುರಿತು ಶೋಕಿಸುತ್ತ ವರ್ಣಾಶ್ರಮಪರಿಪಾಲನೆಗೆ ಕೊರತೆ ತಂದುಕೊಳ್ಳುತ್ತ ಬಳಲುತ್ತಿರಬಾರದು. ಸದ್ಧರ್ಮದಲ್ಲಿಯೂ ಸ್ವಶರೀರದಲ್ಲಿಯೂ ಜಾಗರೂಕನಾಗಿರು" ಎಂದು ಹೇಳಿದೆನೆಂದು ಆತನಿಗೆ ವಿಜ್ಞಾಪಿಸು. ವತ್ಸ ಲಕ್ಷ್ಮಣ, ಮಹಾರಾಜನನ್ನು ನಿಂದಿಸುವ ಕಾರಣವಿಲ್ಲ.

ಲಕ್ಷ್ಮಣ—ಆ ವಿಷಯದಲ್ಲಿ ದೇವಿಗೆ ಸ್ವಾತಂತ್ರ್ಯವಿದೆ.

ಸೀತೆ—ಆತನೊಡನೆ ಹೀಗೂ ವಿಜ್ಞಾಪಿಸು—"ನಿರಪರಾಧಿನಿಯಾದ ನನ್ನನ್ನು ಕೂಡಲೆ ಅಂತರಂಗದಿಂದ ತೊಲಗಿಸಬಾರದಾಗಿತ್ತು. ಹೀಗಿರಲು ಸ್ವದೇಶದಿಂದಲೇ ಹೊರತಳ್ಳುವುದೆಂದರೇನು?

ಲಕ್ಷ್ಮಣ—ಆರ್ಯೆಯ ಸಂದೇಶವು ಉಚಿತವಾಗಿರುವುದು—

ಕಂದ ॥ ಜನಪಾಲಕನಾರ್ಯೆಯನೇಂ
ಮನದಿಂ ಪೊರಮಡಿಸಿದಂದಮೆಂತುಟೊ ಮನೆಯಿಂ।
ಮನೆಮಾತಿರಲದು ದೂರದೆ
ಜನಪದದಲ್ಲಿರಲುಮಾಗದೆಂದುದು ಚಿತ್ರಂ! ॥ ೧೫ ॥

ಸೀತೆ—"ತಪೋವನವಾಸಿನಿಯು ಬೈತಲೆಯಲ್ಲಿ ಕರಸಂಪುಟವನ್ನು ಜೋಡಿಸಿಕೊಂಡು—ಗುಣಹೀನೆಯೆಂದಾಗಲಿ, ಚಿರಪರಿಚಿತೆಯೆಂದಾಗಲಿ, ಅನಾಥೆಯೆಂದಾಗಲಿ, ಸೀತೆಯೆಂದಾಗಲಿ ಹೇಗಾದರೂ ಸರಿಯೆ; ಸ್ಮರಣ ಮಾತ್ರದಿಂದಲಾದರೂ ಅನುಗ್ರಹಿಸಬೇಕೆಂದು ಬಗೆಬಗೆಯಾಗಿ ಕೇಳಿಕೊಂಡಿರುವಳು" ಎಂದು ಹೇಳಿದ ನನ್ನ ಈ ಮಾತನ್ನೂ ಆತನೊಡನೆ ವಿಜ್ಞಾಪಿಸಿಕೊಳ್ಳಬೇಕು.

ಲಕ್ಷ್ಮಣ—

ಕಂದ ॥ ದೊರೆಯಿೂ ವಾಚಿಕಮುಂ ಕೇ
ಳ್ದಿರಿತದ ಗಾಯಕ್ಕೆ ಕಾರವೆರೆದಂತಿರಹೋ।
ಪರಿಮಿತಿಯಿಲ್ಲದೆ ಮಮ್ಮಲ
ಮರುಗುವನೆಂಬುದರೊಳಿಲ್ಲ ಸಂಶಯಮಿನಿಸುಂ ॥ ೧೬ ॥

ಸೀತೆ—"ವಿಶೇಷವಾಗಿ ಉಂಡು ತಿಂದು ಮೆರೆಯತಕ್ಕ ಕಾಲದಲ್ಲಿ ಬಂಧು ಬಳಗದ ನೆರವು; ಕಷ್ಟಕಾಲದಲ್ಲಿ ಸ್ತ್ರೀಯರು ಸಮಾಧಾನಪಡಿಸಬೇಕು" ಎಂಬುದು ಲೋಕದ ನಿಯಮವು. ಆದರೂ, ಆರ್ಯನೀಗ ನನ್ನನ್ನು ಪರಿತ್ಯಾಗಮಾಡಿರುವುದರಿಂದ ನೀನೊಬ್ಬನೇ ಆತನ ಯೋಗಕ್ಷೇಮವನ್ನು ನೋಡಿಕೊಳ್ಳಬೇಕು, ಹೇಗಾದರೂ ಅಣ್ಣನ ಶರೀರದ ವಿಷಯದಲ್ಲಿ ನೀನು ಜಾಗರೂಕನಾಗಿರಬೇಕು.

ಲಕ್ಷ್ಮಣ—ಇದೀಗ ಮಹಾನುಭಾವತೆಗೆ ತಕ್ಕುದು!

ಸೀತೆ—ವತ್ಸ ಲಕ್ಷ್ಮಣ, ನೀನು ನನ್ನ ಪರವಾಗಿ ರಘುಕುಲರಾಜಧಾನಿಯಾಗಿ ಮೆರೆಯುವ ಅಯೋಧ್ಯೆಗೆ ನಮಸ್ಕಾರ ಮಾಡಬೇಕು. ಪ್ರತಿಮಾಗತನಾದ ಮಹಾರಾಜನಿಗೆ ನನ್ನ ಸೇವೆಯನ್ನು ಸಲ್ಲಿಸಬೇಕು. ಅತ್ತೆಯಂದಿರ

ಆಜ್ಞೆಯನ್ನು ಗೌರವದಿಂದ ಪಾಲಿಸಬೇಕು. ಹಿತವನ್ನೇ ನುಡಿಯುತ್ತಿರುವ ನನ್ನ ಗೆಳತಿಯರನ್ನು ಸಮಾಧಾನಪಡಿಸಬೇಕು. ಅವರಿಗೆ ಗುರಿಯಾದ ಈ ಬಡವೆಯನ್ನು ಮರೆತುಬಿಡಬಾರದು. (ಎಂದು ಹೇಳುತ್ತ ರೋದಿಸುವಳು)

ಲಕ್ಷ್ಮಣ—(ಉಮ್ಮಳಿಸುತ್ತ)

ಕಂದ ॥ ವನಕೊಯ್ಯೆಂದತ್ತಿಗೆಯಂ
ಮನಮರುಕದಗೋಳನಂತೆ ಕೇಳುತಿರೆಂದೇಂ ।
ಹನುಮಂ ಲಂಕಾರಣದೊಳ್
ಕೊನೆಗೊಂಡಿರ್ದೆನ್ನನಹಿತನಂದೆಳ್ಬಿಸಿದಂ ॥ ೧೭ ॥

(ಸುತ್ತಲೂ ನೋಡಿ)

॥ ಚಂಪಕಮಾಲೆ ॥

ನಿರುಕಿಸಿ ದೇವಿಯಂ ಹರಿಣವೃಂದವಿದೋ ತೊರೆಯುತ್ತೆ ಪುಲ್ಗಳಂ
ಮರುಗುವುದಿಲ್ಲಿ ಹಂಸಗಣಮುಂ ಕರುಣಾರವದಿಂದೆ ಕೂಗುಗುಂ ।
ತೊರೆವುದು ಕೇಕಿವೃಂದಮನುಕಂಪದೆ ನೃತ್ತಮನೊಯ್ಯನೆಂದೊಡೇಂ
ವರನರಜನ್ಮದಿಂದಲಧಿಕಂ ಮೃಗಪಕ್ಷಿಗಳೊಂದು ಜನ್ಮಮುಂ ॥ ೧೮ ॥

ಸೀತೆ—ವತ್ಸ ಲಕ್ಷ್ಮಣ, ಸೂರ್ಯನು ಮುಳುಗುವ ಸಮಯವಾಯಿತು. ಇಲ್ಲೆಲ್ಲಿಯೂ ಮನುಷ್ಯರ ಸಂಚಾರವಿಲ್ಲ; ಪಕ್ಷಿಗಳು ಹಾರಿಹೋಗುತ್ತಿವೆ; ಕ್ರೂರಮೃಗಗಳು ಸಂಚರಿಸುತ್ತಿವೆ. ಆದುದರಿಂದ ನೀನು ಹೊರಡು. ಇನ್ನಿಲ್ಲಿ ಸಾವಕಾಶಮಾಡುವುದು ಸರಿಯಲ್ಲ.

ಲಕ್ಷ್ಮಣ—(ಕೈಗಳನ್ನು ಜೋಡಿಸಿಕೊಂಡು) ಇದು ಲಕ್ಷ್ಮಣನ ಕೊನೆಯ ನಮಸ್ಕಾರವು. ಆದುದರಿಂದ ಸಾವಧಾನವಾಗಿ ಸ್ವೀಕರಿಸಬೇಕು.

ಸೀತೆ—ನಾನು ಯಾವಾಗಲೂ ಅವಹಿತೆಯಾಗಿಯೇ ಇರುವೆನಷ್ಟೆ!

ಲಕ್ಷ್ಮಣ—ದೇವಿಯೊಡನೆ ಹೀಗೆ ವಿಜ್ಞಾಪಿಸಿಕೊಳ್ಳುವೆನು—

ಕಂದ ॥ ಇನೆಯನನೋ ಬಂಧುಗಳನೊ
ನೆನೆನೆನೆದಾತ್ಮವನೆ ಮೃತಿಗೆ ಬಲಿಯೀಯದಿರೌ ।
ಎನಿವಿರಿದು ಕಷ್ಟಮಪ್ಪೊಡ
ಮಿನವಂಶದ ಗರ್ಭಮಿದನೆ ರಕ್ಷಿಸವೇಳ್ಕುಂ ॥ ೧೯ ॥

ಸೀತೆ—ಸೌಮಿತ್ರಿಯ ಮಾತಿಗೆ ತಡೆಯಿಲ್ಲವಷ್ಟೆ!

ಲಕ್ಷ್ಮಣ—ಇನ್ನೊಂದು ಬಿನ್ನಪವು.

ಸೀತೆ—ಅದೇನು ?

ಲಕ್ಷ್ಮಣ—

ಕಂದ ॥ ಪಿರಿಯಣ್ಣನ ಶಾಸನದಿಂ
ಕರೆತಂದೀ ವಿಜನಮಾದರಣ್ಯಕೆ ನಿನ್ನಂ ।
ಗುರಿಪಡಿಸಿದೆನ್ನ ತಪ್ಪಿತ
ಕುರಿಯದೆ ಕಾರುಣ್ಯದಿಂದೆ ಪರಸಲ್ವೇಳ್ಕುಂ ॥ ೨೦ ॥

ಸೀತೆ—(ಸಂಭ್ರಮದೊಡನೆ) ನೀನು ಅಣ್ಣನ ಆಜ್ಞೆಯನ್ನು ಪರಿಪಾಲಿಸುವವನೆಂದು ಸಂತೋಷಪಡಬೇಕಾದಲ್ಲಿ ದೋಷವನ್ನು ಎಣಿಸುವವರಾರು ?

ಲಕ್ಷ್ಮಣ—(ಪ್ರದಕ್ಷಿಣೆಬಂದು ನಮಸ್ಕರಿಸಿ ಹೊರಡುವನು)

ಸೀತೆ—(ಅಳುತ್ತಿರುವಳು)

ಲಕ್ಷ್ಮಣ— (ದಿಕ್ಕುಗಳನ್ನು ನೋಡುತ್ತ) ಓವ್ರೋ ಲೋಕಪಾಲಕರೇ ಲಾಲಿಸಿರಿ—

ಕಂದ ॥ ಇವಳೆ ಸೊಸೆ ದಶರಥೇಂದ್ರಂ
ಗೆ . . . . .

ಸೀತೆ—ಅತಿಶ್ಲಾಘನೀಯಗಳಾದ ಅಕ್ಷರಗಳು ಕೇಳಬರುವುವು.

ಲಕ್ಷ್ಮಣ— . . ಇವಳೇ ರಾಮಂಗೆ ಧರ್ಮಚಾರಿಣಿಯೆನಿಕುಂ ।

ಸೀತೆ—ಅಂತಹ ಭಾಗ್ಯವಿಶೇಷವು ನನಗೆಲ್ಲಿ ?

ಲಕ್ಷ್ಮಣ—ಧವಗೃಹನಿರ್ವಾಸಿತೆಯಾ
ದ . . . . .

ಸೀತೆ—(ಕಿವಿಗಳನ್ನು ಮುಚ್ಚಿಕೊಳ್ಳುವಳು)

ಲಕ್ಷ್ಮಣ— . . ಇವಳೊರ್ವಳನಡವಿಯಲ್ಲಿ ರಕ್ಷಿಸವೇಳ್ಕುಂ ॥ ೨೧ ॥

ಸೀತೆ—(ಗರ್ಭವನ್ನು ತೋರಿಸುವಳು)

ಲಕ್ಷ್ಮಣ—ಆರ್ಯೆಯ ಸಲುವಾಗಿ ಸಮೀಪದಲ್ಲೇ ಹರಿಯುವ ಗಂಗಾಮಾತೆಯೊಡನೆ ವಿಜ್ಞಾಪಿಸಿಕೊಳ್ಳುವೆನು—

॥ ಉತ್ಪಲಮಾಲೆ ॥

ದೇವಿ ಬಳಲ್ದಳಾಗೆ ದಿವಿಜಾಪಗೆ ನೀನೆ ಸರೋಜಗಂಧಮಂ
ತೀವಿದ ವೀಚಿಮಾರುತಸಿನೊಯ್ಯನನುಗ್ರಹಿಸುತ್ತಿರಂತೆಯೇ ।

ಭಾವಿಸಿ ವಿವಾಹಕೆಂದಿಳಿವ ವೇಳೆಗೆ ನಿನ್ನ ದಯಾವಲೋಕನಂ
ದೇವಿಗೆ ಕಾಪೆನಲ್ಕೆ ತಡೆಯೊರ್ಮೆಯೆ ನಲ್ಮೆಯಿನಂಬುವೇಗಮಂ ॥ ೨೨ ॥

ಕಾನನಮಧ್ಯದಲ್ಲಿ ನೆಲಸಿರ್ಪ ಮುನೀಂದ್ರರೊಳಿಂತು ಭಕ್ತಿಯಿಂ
ದಾನತನಾಗಿ ಬಿನ್ನವಿಪೆನಿಂದಿವಳುಜ್ಝಿತೆಯೆಂದನಾಥೆಯೆಂ ।
ದಾನದೆ ಹೇಯಭಾವಮನಿನಾನ್ವಯದೇವಿಯನೀ ಕುಲೀನೆಯಂ
ಕಾನನದಲ್ಲಿ ಪಾಲಿಪುದು ನೀಮಿವಳಂ ಕರುಣಾರ್ದ್ರದೃಷ್ಟಿಯಿಂ ॥ ೨೩ ॥

॥ ಚಂಪಕಮಾಲೆ ॥

ವನದೊಳಗಿರ್ಪ ದೇವತೆಗಳೊರ್ಚಣಮಿತ್ತಲೆ ಕೇಳ್ವುದೆಲ್ಲರುಂ
ವಿನಯದೆ ಕೈಗಳಂ ಮುಗಿದು ಪೇಳ್ದಪೆನೆನ್ನದಿದೊಂದುಬಿನ್ನಪಂ ।
ವನದೊಳೆ ನಿದ್ದೆವೋಗಿರೆಯುಮಂತೆ ಪ್ರಮಾದಕೆ ವಶ್ಯಳಾಗೆಯುಂ
ನೆನೆವುತೆ ಯತ್ನದಿಂ ಪೊರೆವುದೀ ವಿಷಮಸ್ಥಿತೆಯಂ ಮಹೀಜೆಯಂ ॥ ೨೪ ॥

ಕಂದ ॥ ಪರರಿಲ್ಲಿಗೆ ಬರಲಾಗದು
ಪೊರಪೊರಡಿಂ ಕೂಳ್ಮಿಗಂಗಳೀಬನದಿಂದಂ ।
ಹರಿಣಿಯರೇ ನೀಮೆಂದುಂ
ಬೆರೆದಿರ್ಪುದು ವಿಪ್ರವಾಸಸಖಿಯಂ ನಲವಿಂ ॥ ೨೫ ॥

॥ ಚಂಪಕಮಾಲೆ ॥

ಕಲರವವಾಹಿನೀಸಖಿಯರೇ ಪರಿಪೂಜ್ಯರೆ ಲೋಕಪಾಲರೇ
ಕುಲಧರರೆಂಬ ಸೋದರರೆ ವಿಷ್ಣುಪದೋದ್ಭವೆ ತಾಯೆ ನೀಮಿದೋ ।
ಒಲಿದೊಲಿದಿಲ್ಲಿರಾಜಸುತೆಯಂ ನೆರೆಲಾಲಿಸಿ ಪಾಲಿಸುತ್ತಿರಿಂ
ಕೆಲದೊಳೆ ನಿಂತು ಬಿನ್ನವಿಪ ಲಕ್ಷ್ಮಣನೀಗಳೆ ಪೋದಪಂ ಗಡಾ ॥ ೨೬ ॥

(ಎಂದು ನಮಸ್ಕರಿಸಿ ಹೊರಟುಹೋಗುವನು)

ಸೀತೆ—ಏನು! ನಿಜವಾಗಿಯೂ ಲಕ್ಷ್ಮಣನು ಏಕಾಕಿನಿಯಾದ ನನ್ನನ್ನು ಬಿಟ್ಟು ಹೊರಟು ಹೋದನೆ? (ಸುತ್ತಲೂ ನೋಡಿ) ಆಹಾ! ಸರ್ವಥಾ ಕೆಟ್ಟೆನು! ಸೂರ್ಯನು ಮುಳುಗಿದನು. ಲಕ್ಷ್ಮಣನ ಧ್ವನಿಯೂ ಕೂಡ ಕೇಳಿಸುವುದಿಲ್ಲವಲ್ಲಾ! ಹುಲ್ಲೆಗಳೆಲ್ಲವೂ ತಂತಮ್ಮ ವಸತಿಗಳ ಕಡೆಗಾಗಿ ಸಾಗುತ್ತಿವೆ; ಹಕ್ಕಿಗಳು ಹಾರುತ್ತಿವೆ; ಕ್ರೂರಜಂತುಗಳು ಸಂಚರಿಸತೊಡಗಿಮವು. ಕಣ್ಣಿಗೆ ಕತ್ತಲೆ ಕವಿಯುತ್ತಿದೆ; ಜನಸಂಚಾರವಿಲ್ಲದ ಗೊಂಡಾರಣ್ಯವಿದು. ಮುಂದ

ಭಾಗಿನಿಯಾದ ನಾನೀಗ ಮಾಡುವುದೇನು? ಒಬ್ಬಳೇ ಕಾಡಿನಲ್ಲಿ ಹೇಗೆ ಸಂಚರಿಸಬೇಕು? ಆಹಾ! ನಾನೆಂತಹ ಪಾಪಕರ್ಮವನ್ನೆಸಗಿರಬಹುದೊ? ಅಲ್ಲದೆ ಇಂತಹ ವಿರಹವೇದನೆಯನ್ನು ಅನುಭವಿಸುತ್ತಿದ್ದೇನೆ? ಲಕ್ಷ್ಮಣನ ನಿಯೋಗವನ್ನು ಕೈಕೊಂಡ ಗಂಗಾಮಾತೆಯಾಗಲಿ, ಲೋಕಪಾಲಕರಾಗಲಿ, ವನದೇವತೆಗಳಾಗಲಿ ರಘುಕುಲಕ್ಕೆ ಪರಂಪರೆಯಾಗಿ ಬಂದ ವಸಿಷ್ಠವಾಲ್ಮೀಕಿ ಮೊದಲಾದ ಮಹಾಮಹಿಮರೆನಿಸಿದ ಮಹರ್ಷಿಗಳಾಗಲಿ ನೀವೆಲ್ಲರೂ ನನ್ನನ್ನು ಹೀಗೆ ಪರಿತ್ಯಜಿಸಿದಿರೇ? (ಎಂದು ಹೇಳುತ್ತ ಮೂರ್ಛೆಹೊಂದುವಳು)

(ಬಳಿಕ ವಾಲ್ಮೀಕಿಯು ಬರುವನು)

ವಾಲ್ಮೀಕಿ—(ಸಂಭ್ರಮದೊಡನೆ)

ಕಂದ ॥ ಮರುಗುತ್ತನಾಥೆ ಗರ್ಭಿಣಿ
ಮೊರೆಯಿಡುವಳರಣ್ಯದಲ್ಲಿಯೊರ್ವಳೆ ಎಂದಾ।
ಸುರನದಿಗೆಯ್ದಿದ ಬಟುಗಳ್
ನೆರೆದೊಕ್ಕಣಿಸಲ್ಕೆ ಕೇಳ್ದು ಶೀಘ್ರದೆ ಬಂದೆಂ ॥ ೨೭ ॥

ಆದುದರಿಂದ ಅವಳನ್ನೇ ಹುಡುಕಿ ನೋಡುವೆನು (ಹಾಗೆಯೇ ಹುಡುಕುವನು)

ಸೀತೆ—(ಮೂರ್ಛೆತಿಳಿದೆದ್ದು) ಇದಾರು ನನ್ನನ್ನು ನೋಡುತ್ತಿರುವುದು? (ಯೋಚಿಸಿ) ಯಾರೂ ಅಲ್ಲ. ಆಜ್ಞಾಕಾರಿಯಾದ ಲಕ್ಷ್ಮಣನ ಬಿನ್ನಹದಂತೆ ಗಂಗಾಮಾತೆಯು ಜಾಗ್ರತೆಯಿಂದ ತೆರೆಗಳ ಮೂಲಕ ನನ್ನನ್ನು ಅನುಗ್ರಹಿಸುತ್ತಿರುವಳು.

ವಾಲ್ಮೀಕಿ—ಕಗ್ಗತ್ತಲೆ ಕವಿದಿರುವುದರಿಂದ ಏನೊಂದೂ ಕಣ್ಣಿಗೆ ಕಾಣಿಸುವುದಿಲ್ಲ. ಆದುದರಿಂದ ಕೂಗಿ ನೋಡುವೆನು! ಯಾರಿಲ್ಲಿ? ನಾನು ಬಂದಿರುವೆನು.

ಸೀತೆ—(ಸಂತೋಷದೊಡನೆ) ವತ್ಸ ಲಕ್ಷ್ಮಣ, ಮರಳಿಬಂದೆಯಾ?

ವಾಲ್ಮೀಕಿ—ನಾನು ಲಕ್ಷ್ಮಣನಲ್ಲ.

ಸೀತೆ—(ತಲೆಮುಸುಕನ್ನು ಸರಿಪಡಿಸಿಕೊಂಡು ಸ್ವಗತಂ) ಅಯ್ಯೋ! ಇವನಾವನೋ ಪರಪುರುಷನು. ಈ ಗಂಡವನ್ನು ಹೇಗೆ ಪರಿಹರಿಸಿಕೊಳ್ಳಲಿ? (ಯೋಚಿಸಿಕೊಂಡು) ಆಗಲಿ! (ಪ್ರಕಾಶಂ) ನಾನು ಅಬಲೆ; ಒಂಟಿಯಾಗಿರುವೆನು.

ವಾಲ್ಮೀಕಿ — ಇದೋ! ನಾನಿರುವೆನು. ಮಗಳೆ, ಪರಪುರುಷನೆಂದು ಸಂದೇಹಪಡಬೇಡ. ಸಾಯಂಕಾಲ ಸ್ನಾನಮಾಡಲು ಗಂಗಾತೀರಕ್ಕೆ ಬಂದಿದ್ದ ಒಟುಗಳು ನಿನ್ನ ಸಂಗತಿಯನ್ನು ತಿಳಿಸಿದರು. ಆದುದರಿಂದ ತಪಸ್ವಿಯಾದ ನಾನು ನಿನ್ನನ್ನು ಹುಡುಕುವುದಕ್ಕಾಗಿ ಇಲ್ಲಿಗೆ ಬಂದಿರುವೆನು. ಈಗ ಪೂಜ್ಯಳಾದ ನಿನ್ನೊಡನೆ ಹೀಗೆ ಕೇಳುವೆನು—

ಕಂದ ॥ ಜಿತಸಂಗ್ರಾಮಂ ಧರ್ಮದ
ಮತದಿಂ ಮೇದಿನಿಯನಾಳೆ ರಘುಕುಲರಾಮಂ ।
ಸುತೆ ನಿನಗೇಂ ಕಾರಣದಿಂ
ದತಿಕಷ್ಟಂ ಪ್ರಾಪ್ತಮಾಯ್ತೊ! ನಿರವಿಸವೇಳ್ಕುಂ ॥ ೨೮ ॥

ಸೀತೆ — ಆ ಪೂರ್ಣಚಂದ್ರನಿಂದಲೇ ನನಗೆ ವಜ್ರಪಾತವು.

ವಾಲ್ಮೀಕಿ — ಏನೇನು? ರಾಮನಿಂದಲೇ ನೀನು ವಿಪತ್ತಿಗೆ ಗುರಿಯಾದೆಯೊ?

ಸೀತೆ — ಹಾಗಲ್ಲದೆ ಮತ್ತೇನು?

ವಾಲ್ಮೀಕಿ — ವರ್ಣಾಶ್ರಮದ ಮೇರೆಯಾಗಿರುವ ಮಹಾರಾಜರಾಮಚಂದ್ರನು ನಿನ್ನನ್ನು ಪರಿತ್ಯಜಿಸಿರುವುದಾದರೆ ನಿನಗೆ ಶುಭವಾಗಲಿ! ನಾನು ಹೊರಡುವೆನು. (ಎಂದು ಹೊರಡಲು ಉಪಕ್ರಮಿಸುವನು)

ಸೀತೆ — ನಾನು ವಿಜ್ಞಾಪಿಸಿಕೊಳ್ಳಲೆ?

ವಾಲ್ಮೀಕಿ — ಅದೇನು? ಹೇಳು.

ಸೀತೆ — ರಘುವರನು ಹೊರಡಿಸಿದನೆಂದು ನಿಮ್ಮ ಕನಿಕರವು ನನ್ನ ಮೇಲೆ ಪಸರಿಸದೆ ಹೋಗುವುದಾದರೂ ಈ ಗರ್ಭವು ರಘುಸಗರದಿಲೀಪ ದಶರಥ ಮೊದಲಾದ ಉತ್ತಮೋತ್ತಮರ ಸಂತತಿಯೆಂಬ ಭಾವನೆಯಿಂದ ಲಾದರೂ ಕಾಪಾಡತಕ್ಕಹಾಗಿಲ್ಲವೆ?

ವಾಲ್ಮೀಕಿ — (ಹಿಂತಿರುಗಿ ನೋಡಿ ಸ್ವಗತಂ) ಇದೇನು! ಇಕ್ಷ್ವಾಕುವಂಶವನ್ನೇ ಉದಾಹರಿಸುತ್ತಿರುವಳು? ಕೇಳಿ ನೋಡುವೆನು. (ಪ್ರಕಾಶಂ) ವತ್ಸೆ ನೀನೇನು ದಶರಥನ ಸೊಸೆಯೊ?

ಸೀತೆ — ಮಹಾನುಭಾವರ ಸಂಕಲ್ಪದಂತೆಯೆ.

ವಾಲ್ಮೀಕಿ — ವಿದೇಹಾಧಿಪತಿಯಾದ ಜನಕನ ಮಗಳೊ?

ಸೀತೆ — ಹೌದು.

ವಾಲ್ಮೀಕಿ—ಸೀತೆಯೋ ಏನು?

ಸೀತೆ—ಪೂಜ್ಯನೆ, ಸೀತೆಯಲ್ಲ; ನಿರ್ಭಾಗ್ಯೆ.

ವಾಲ್ಮೀಕಿ—ಕಷ್ಟವೇ! ನಾನೆಂತಹ ನಿರ್ಭಾಗ್ಯನು? ಯಾವುದಕ್ಕಾಗಿ ಈ ವಧುವನ್ನು ಉಪ್ಪರಿಗೆಯಿಂದ ಕೆಳಗಿಳಿಸಿದರೊ?

ಸೀತೆ—(ಲಜ್ಜೆಯಿಂದ ಸುಮ್ಮನಿರುವಳು)

ವಾಲ್ಮೀಕಿ—(ಸ್ವಗತಂ) ಇದೇನು! ಲಜ್ಜೆಯಿಂದ ತಲೆಬಗ್ಗಿಸುವಳು? ಇರಲಿ! ಯೋಗದೃಷ್ಟಿಯಿಂದ ನಾನೇ ತಿಳಕೊಳ್ಳುವೆನು. (ಧ್ಯಾನಮಾಡಿ ಪ್ರಕಾಶಂ) ಮಗಳೇ, ಲೋಕಾಪವಾದದ ಭಯದಿಂದಲೇ ರಾಮನು ನಿನ್ನನ್ನು ಪರಿತ್ಯಾಗಮಾಡಿರುವನಲ್ಲದೆ ಮನಃಪೂರ್ವಕವಾಗಿ ತೊರೆದಿಲ್ಲ. ನಿರಪರಾಧಿನಿಯಾದ ನಿನ್ನನ್ನು ನಾವು ಹಾಗೆಯೇ ಬಿಡುವಂತಿಲ್ಲ! ಬಾ! ಆಶ್ರಮಕ್ಕೆ ಹೋಗೋಣ.

ಸೀತೆ—ತಾವು ಯಾರೆಂದು ತಿಳಿಯದೆ ಹೋದೆನು.

ವಾಲ್ಮೀಕಿ—ಕೇಳು—

॥ ಮಾಲಿನಿ ॥

ಇನಿತು ಬೆದರಲೇಂ ವಾಲ್ಮೀಕಿಯಾನನ್ಯನಲ್ಲಂ
ಜನಕದಶರಥರ್ಗಂ ಬಾಲ್ಯದಿಂ ಮಿತ್ರನಿರ್ಪೆಂ।
ಜನಕಜೆ ಪರಶಂಕಾಭಾವಮಂ ಬಿಟ್ಟು ನೋಡಾ!
ಮನದೆ ತಿಳಿವುದೆನ್ನಂ ತಂದೆಯಂ ಮಾನನಂ ಮೇಣ್ ॥ ೨೧ ॥

ಸೀತೆ—ಪೂಜ್ಯರೇ, ಅಭಿವಂದಿಸುವೆನು.

ವಾಲ್ಮೀಕಿ—ವೀರಮಾತೆಯೆನಿಸು! ಮರಳಿ ಪತಿದರ್ಶನವನ್ನು ಪಡೆ!

ಸೀತೆ—ತಾವು ಲೋಕಕ್ಕೆ ವಾಲ್ಮೀಕಿಮಹರ್ಷಿಗಳು! ನನಗೆ ತಂದೆಯೇ ಸರಿ. ಆದುದರಿಂದ ತಮ್ಮ ಆಶ್ರಮಕ್ಕೆ ಬರಬಹುದು. (ಗಂಗೆಯನ್ನು ನೋಡಿ ಕೈಮುಗಿದು) ಭಗವತಿ ಭಾಗೀರಥಿ, ನನಗೆ ಸುಖಪ್ರಸವವುಂಟಾದರೆ ಅನುದಿನವೂ ಅಂದವಾಗಿ ರಚಿಸಿದ "ಕುಂದಮಾಲೆ"ಯಿಂದ ನಿನ್ನನ್ನು ಪೂಜಿಸುವೆನು.

ವಾಲ್ಮೀಕಿ—(ಸೀತೆಯನ್ನು ಉದ್ದೇಶಿಸಿ) ಈ ದಾರಿಯು ಸಂಚಾರಕ್ಕೆ ಬಹುಕಷ್ಟಕರವಾಗಿರುವುದು. ನಿನಗೆ ಮತ್ತಷ್ಟು ದುರ್ಗಮವಾಗಿರುವುದು. ಆದುದರಿಂದ ನಾನು ದಾರಿತೋರಿಸಿದಂತೆಯೇ ನೀನು ನಡೆದು ಬರಬೇಕು—

॥ ಮತ್ತೇಭವಿಕ್ರೀಡಿತ ॥

ಇದೊ ದರ್ಭಾಂಕುರವಿಲ್ಲಿ ತೋರ್ಪುದು ಪದನ್ಯಾಸಕ್ಕೆ ತಾನೆಚ್ಚರಂ
ಪುದಿದಿರ್ಕುಂ ತರುಶಾಖೆಯಿಲ್ಲಿ ತಲೆವಾಗಿಂತತ್ತಲೀ ವಾಮದೊಳ್ ।
ಅದೊ ಗರ್ತಂ ಬಲಭಾಗಕಿರ್ಪ ಮರನಂ ನೆಮ್ಮುತ್ತೆ ಮುಮ್ಮುಂದೆ ಬಂ
ದಿದೊ ಪುಣ್ಯಾಕರವೀಸರೋವರದೆ ನೀಂ ಕೈಕಾಲ್ಗಳಂ ಕರ್ಚಿ ಬಾ ॥೩೦॥

ಸೀತೆ—(ಹೇಳಿದಂತೆಯೇ ನಡೆಯುವಳು)

ವಾಲ್ಮೀಕಿ—(ಸೀತೆಯನ್ನು ಕುರಿತು)

ಕಂದ ॥ ಧರಣಿಜೆ ಗರ್ಭದ ಕತದಿಂ
ಮರುಗದಿರಿಕ್ಷ್ವಾಕುವಂಶದರಸರ್ಗೆವಿಮ್ಮಿಂ ॥
ಜರುಗುವುವೆಂಬುದನರಿಯಾ
ವರಪುಂಸವನಾದಿಸರ್ವಸಂಸ್ಕಾರಂಗಳ್ ॥ ೩೧ ॥

॥ ಇಂದ್ರವಂಶ ॥

ಅಲ್ಲಿರ್ಪ ಕೌಸಲ್ಯೆಯ ಪಾದಸೇವೆಯುಂ
ತಿಲ್ಲಿರ್ಪ ವೃದ್ಧಾಜನಸೇವೆಯುಂದಮುಂ ।
ಬಲ್ಲಂತಿರೀಕನ್ಯೆಯರೊಂದುಗೂಡೆ ಮು
ತ್ತಲ್ಲಿರ್ಪ ಶುದ್ಧಾಂತಮೆ ಈ ತಪೋವನಂ ॥ ೩೨ ॥

(ಎಂದೆಲ್ಲರೂ ಹೊರಟುಹೋಗುವರ

## ದ್ವಿತೀಯಾಂಕಂ

(ಬಳಿಕ ಇಬ್ಬರು ಮುನಿಕನ್ಯೆಯರು ಪ್ರವೇಶಿಸುವರು)

ಮೊದಲನೆಯವಳು—ಸಖಿ ವೇದವತಿ, ಭಾಗ್ಯವಶದಿಂದ ಸುಖವಾಗಿರುವೆಯಷ್ಟೆ? ನಿನ್ನ ಗೆಳತಿಯಾದ ಸೀತೆಗೆ ರಾಮಚಂದ್ರನ ಹಾಗೆ ಸುಂದರರಾದ ಪುತ್ರರಿಬ್ಬರು ಜನಿಸಿದರು.

ವೇದವತಿ—ಹಾಗಾದರೆ ಬಹುಸಂತೋಷವೇ ಸರಿ! ಅವರ ಹೆಸರೇನು?

ಮೊದಲ— ಪೂಜ್ಯರು ಹಿರಿಯವನನ್ನು ಕುಶನೆಂದೂ ಕಿರಿಯವನನ್ನು ಲವನೆಂದೂ ಕರೆದಿರುವರು.

ವೇದವತಿ—ಅವರೀಗ ಓಡಾಡುವಷ್ಟು ಸಮರ್ಥರಾಗಿರುವರೇನು ?

ಮೊದಲ— ನಾನು ಅವರ ಯೋಗ್ಯತೆಯನ್ನು ಏನೆಂದು ಹೇಳಲಿ ?

॥ ಮಾಲಿನಿ ॥

ಹರಿಣಗಣಮನೇ ಬೆನ್ನಟ್ಟುತೋಡಾಡುತುಂ ಕೇ
ಸರಿಶಿಶುಗಳನೀಳ್ದುಂ ಮಲ್ಲರಪ್ಪಂದವೊಂದೇಂ ।
ಪಿರಿದೆನೆ ಮುನಿಪತ್ನೀಚಿತ್ತಮಂ ಸೂರೆಗೊಂಡುಂ
ಮೆರೆವ ತರಳರಂದಂ ನೋಡಲಾನಂದಮೆಂದುಂ ॥ ೧ ॥

ಆ ಬಾಲಕರು ಮುನಿಜನರ ಮಡಿಲಿಂದ ಮಡಿಲಿಗೆ ನಡೆದಾಡುತ್ತಿರುವ ಬೆಡಗನ್ನು ಹೇಳಿ ತೀರದು. ಈಗ ವಾಲ್ಮೀಕಿಮಹರ್ಷಿಗಳು ರಚಿಸಿರುವ ರಾಮಾಯಣವನ್ನು ಕಂಠಪಾಠಮಾಡುತ್ತಿರುವರು.

ವೇದವತಿ— ಈ ವೃತ್ತಾಂತವನ್ನು ಕೇಳಿದುದರಿಂದಲೇ ಸೀತೆಯು ಪುಣ್ಯವತಿಯೆಂದು ಊಹಿಸುವೆನು.

ಮೊದಲ— ಅಂತಹ ಪುಣ್ಯವನ್ನೇ ಎಲ್ಲರೂ ಸಂಪಾದಿಸಬೇಕು. ಅದು ಹಾಗಿರಲಿ! ನೈಮಿಷಾರಣ್ಯದ ಸಂಗತಿಯೇನಾದರೂ ತಿಳಿದಿರುವುದೇ ?

ವೇದವತಿ— ಮಹಾರಾಜನ ಸಲುವಾಗಿ ಯಜ್ಞೋಪಕರಣಗಳನ್ನೆಲ್ಲಾ ಸಿದ್ಧಪಡಿಸಿರುವರಂತೆ. ತಪಸ್ವಿಗಳೆಲ್ಲರೂ ಗೃಹಿಣಿಯರೊಂದಿಗೆ ಬರಬೇಕೆಂದು ಅಕ್ಕರೆಯಿಂದ ಕರೆದಿರುವರಂತೆ!

ಮೊದಲ—ವಾಲ್ಮೀಕಿಮುನಿಗಳಿಗೂ ಕರೆ ಬಂದಿರುವುದೇನೋ ?

ವೇದ—ವಾಲ್ಮೀಕಿತಪೋವನಕ್ಕೂ ರಾಜದೂತನು ಬಂದಿರುವನೆಂದು ಕೇಳಿರುವೆನು. ನಾನೀಗ ಸೀತೆಯನ್ನು ಕಾಣಬೇಕಾಗಿದೆ. ಅವಳು ಎಲ್ಲಿರಬಹುದು ?

ಮೊದಲ—ಕಾಲವನ್ನು ಕಳೆಯುವುದು ಹೇಗೆ ಎಂದು ಚಿಂತಿಸುತ್ತ ಇಲ್ಲೇ ಸಾಲುಮರದ ನೆರಳಲ್ಲಿ ಕುಳಿತಿರುವಳು. (ಎಂದು ಹೇಳಿ ಇಬ್ಬರೂ ತೆರಳುವರು)

## ಇಂತಿದು ಪ್ರವೇಶಕಂ

(ಬಳಿಕ ನೆಲದಲ್ಲಿ ಕುಳಿತು ಚಿಂತಾಮಗ್ನೆಯಾದ ಸೀತೆಯು ಪ್ರವೇಶವು)

ಸೀತೆ—(ನಿಟ್ಟುಸಿರುಬಿಡುತ್ತ) ಆಹಾ ಕಷ್ಟವೇ! ಸ್ವಾಭಾವಿಕವಾಗಿಯೂ

ಕಠಿನಮನಸ್ಸುಳ್ಳ ಗಂಡಸರನ್ನು ನಂಬಬಾರದು. ಶಿಲಾಸ್ತಂಭಗಳಲ್ಲಿ ಕೆತ್ತಿ ನಿಲ್ಲಿಸಲು ಯೋಗ್ಯವಾದ ಸ್ನೇಹವುಳ್ಳ ದಂಪತಿಗಳು ಯಾರೆಂಬ ಸಂದರ್ಭ ದಲ್ಲಿ— ಸ್ವರ್ಗಲೋಕದಲ್ಲಿ ಉಮಾಮಹೇಶ್ವರರೆಂತಲೂ ಮರ್ತ್ಯಲೋಕದಲ್ಲಿ ಸೀತಾರಾಮರೆಂತಲೂ ವಿಶೇಷವಾದ ಪ್ರಖ್ಯಾತಿಯನ್ನು ಆರೋಪಿಸಿ, ನಿರಪ ರಾಧಿನಿಯಾದ ನನ್ನನ್ನು ಇಂತಹ ಕಷ್ಟಕ್ಕೆ ಗುರಿಪಡಿಸಿದನಲ್ಲ! ಅದಕ್ಕಾಗಿ ಆರ್ಯಪುತ್ರನನ್ನು ಎಷ್ಟು ನಿಂದಿಸಿದರೂ ಸಾಲದು! ಆದರೇನು? ಹಿಂದಕ್ಕೆ ಆತನು ದೀರ್ಘವಾದ ವಿಯೋಗದುಃಖವನ್ನು ಅನುಭವಿಸಲಾರದೆ ಅನೇಕ ಯೋಜನ ದೂರದಲ್ಲಿರುವ ಲಂಕೆಯನ್ನು ಹುಡುಕಿ ದುಷ್ಟರನ್ನು ಸಂಹರಿಸಿ ನನ್ನನ್ನು ಕರೆದುಕೊಂಡು ಹೋಗಿ ಸ್ನೇಹವನ್ನು ಕಾಪಾಡಿಕೊಳ್ಳಲಿಲ್ಲವೆ? ಇಂದೇಕೆ ನಾನವನನ್ನು ದೂಷಿಸಿಕೊಳ್ಳಲಿ? ಹೇಗೆ ಯೋಚಿಸಿದರೂ ನಾನೇ ಆತನಿಗೆ ವಿಶೇಷದುಃಖಕಾರಿಣಿಯು! ಆತನೊಡನೆ ನೋಡಿದ ಚಂದ್ರೋದಯ ವನ್ನೂ, ಆತನೊಂದಿಗೆ ಕೇಳಿದ ಕೋಗಿಲೆಗಳ ಮಧುರಾಲಾಪವನ್ನೂ, ಆತ ನೊಡಗೂಡಿ ಅನುಭವಿಸಿದ ಮಲಯಾನಿಲಸ್ಪರ್ಶವನ್ನೂ ಇಲ್ಲಿ ನಾನು ಏಕಾ ಕಿನಿಯಾಗಿ ನೋಡಿ ಕೇಳಿ ಅನುಭವಿಸಿದೆನು. ಪ್ರಾಣಗಳನ್ನು ಬಿಡುವೆನೆಂದರೆ, ಅದು ನನ್ನಂತಹ ಅಬಲೆಯರಿಂದ ಸಾಧ್ಯವಾಗದು. ಸ್ವಾಮಿಯು ಪ್ರೀತಿಗೆ ಪಾತ್ರಳಾಗಿದ್ದ ನಾನಂದು ಮಿಥಿಲಾನಗರದ ಜನರೆಲ್ಲರಿಗೂ ಬೇಕಾದವ ಳಾಗಿದ್ದೆನು. ಈಗ ಶೋಚನೀಯಳಾಗಿ ಪರಿತ್ಯಕ್ತಳಾದೆನೆಂದು ಜನಿಸುವ ದುಃಖದಿಂದ ತಲೆದೋರುವ ಲಜ್ಜೆಯು ನನ್ನನ್ನು ಬಹಳವಾಗಿ ಪೀಡಿಸುತ್ತಿರು ವುದು. ಈಗಲಾದರೆ, ಜನಿಸಿದ ಮಕ್ಕಳಿಬ್ಬರನ್ನೂ ಲಾಲಿಸಿ ಪಾಲಿಸಿದಂತಾ ಯಿತು. ಭಗವಂತನಾದ ವಾಲ್ಮೀಕಿಯೂ ಆದರಿಸುತ್ತಿರುವನು. ಆದುದ ರಿಂದ ನಾನು ಹೀಗೆ ತಪೋವನವಾಸವಿರುದ್ಧವಾದ ರೀತಿಯಿಂದ ನಿಟ್ಟುಸಿರು ಬಿಡುತ್ತ ಕಾಲಕಳೆಯುತ್ತಿರುವುದು ಸರಿಯಲ್ಲ. ಪ್ರಿಯಸಖಿಯಾದ ವೇದ ವತಿಗೆ ಹೇಳದೆಯೂ ಆಕೆಯ ಸಂಗಡ ಯೋಚಿಸದೆಯೂ ಇರುವುದೇ ನನ್ನ ಮರಣವ್ಯವಸಾಯಕ್ಕೆ ಪ್ರತಿಬಂಧಕವು.

(ಬಳಿಕ ವೇದವತಿಯು ಪ್ರವೇಶಿಸುವಳು)

ವೇದವತಿ—(ಸ್ವಗತಂ) ತಪೋಧನರನ್ನು ಪೂಜಿಸಿ ಅತಿಥಿಗಳಿಗೆ ತಕ್ಕ ಉಪಚಾರಗಳನ್ನು ಮಾಡಿದುದಾಯಿತು. ಇನ್ನು ಸಾಲುಮರದ ಕೆಳಗೆ ಕುಳಿ ತಿರುವ ಸಖಿಯನ್ನು ಮನ್ನಿಸುವೆನು. (ಸುತ್ತಿ ನೋಡಿ) ಈ ವಿದೇಹರಾಜ ನಂದಿನಿಯು ಗ್ರೀಷ್ಮಕಾಲದ ಲತೆಯಂತೆ ಬಡವಾಗಿ ಬೆಳ್ಳಗೆ ತೋರುತ್ತ

ನೋಡುವವರ ಮನಸ್ಸಿಗೆ ವ್ಯಸನವನ್ನು ಉಂಟುಮಾಡುತ್ತ ಸಾಲುಮರದ ಬುಡದಲ್ಲಿ ಕುಳಿತುಕೊಂಡಿರುವಳು. ನಾನೀಗಲೇ ಅವಳ ಹತ್ತಿರಕ್ಕೆ ಹೋಗುವೆನು. (ಎಂದು ಸಮೀಪಕ್ಕೆ ಹೋಗಿ) ಆಹಾ! ಈಕೆಯು ಚಿಂತಾಪರವಶಳಾಗಿ ಕುಳಿತಿರುವಂತೆ ತೋರುತ್ತಿದೆ. ಮುಂಗುರುಳುಗಳು ನಯನಗಳನ್ನು ಕವಿದಿರುವುವು. ಮುಖವು ಬಾಗಿರುವುದು. ಕೂಗಿ ನೋಡುವೆನು. (ಪ್ರಕಾಶಂ) ಸಖಿ ವೈದೇಹಿ! ವೈದೇಹಿ! (ಎಂದು ಕರೆಯುವಳು)

ಸೀತೆ—(ಸಂತಸದೊಡನೆ ನೋಡಿ) ಓಹೋ! ಸಂತೋಷವು! ಬಹು ಸಂತೋಷವು! ನನ್ನ ಗೆಳತಿಯಾದ ವೇದವತಿಗೆ ಸುಖಾಗಮನವಲ್ಲವೆ? (ಎಂದು ಹೇಳುತ್ತ ಆಲಿಂಗಿಸಿಕೊಳ್ಳುವಳು. ಬಳಿಕ ಇಬ್ಬರೂ ಕುಳಿತುಕೊಂಡು)

ವೇದ—ಕುಶಲವರಿಗೆ ಕುಶಲವಲ್ಲವೆ?

ಸೀತೆ—ವನವಾಸಿಗಳಿಗೆ ತಕ್ಕಹಾಗೆ.

ವೇದ—ಅದೇನು! ನಿನ್ನ ಬಗೆ ಹೀಗೆ?

ಸೀತೆ—(ವೇಣಿಯನ್ನು ತೋರಿಸಿ) ಅದೂ ಇದರಂತೆಯೇ ಇರಬೇಕಲ್ಲವೆ?

ವೇದ—(ಸ್ವಗತಂ) ಈ ತಪಸ್ವಿನಿಯು ಒಳಗೊಳಗೇ ಬಹಳವಾಗಿ ಮರುಗುತ್ತಿರುವಳು. ನಾನೀಗ ರಾಮನ ಸಮಾಚಾರವನ್ನು ಹೇಳಿ ಸಮಾಧಾನಪಡಿಸುವೆನು. (ಪ್ರಕಾಶಂ) ಮುಗ್ಧೇ, ಮಮತೆಯಿಲ್ಲದವನೂ ನಿರನುಕ್ರೋಶನೂ ಎನಿಸಿದವನ ಸಲುವಾಗಿ ಬಹುಳಪಕ್ಷದ ಚಂದ್ರಲೇಖೆಯಂತೆ ದಿನದಿನಕ್ಕೂ ನೀನು ಕ್ಷಯಿಸುತ್ತಿರುವೆಯಲ್ಲ?

ಸೀತೆ—ಅವನೇನು ನಿರ್ದಯನಾಗಿರುವನೇ?

ವೇದ—ನಿನ್ನ ಪರಿತ್ಯಾಗದಿಂದ!

ಸೀತೆ—ನಾನು ಪರಿತ್ಯಕ್ತಳೇನು?

ವೇದ—(ನಕ್ಕು ಜಡೆಯನ್ನು ಸರಿಪಡಿಸುತ್ತ) ಲೋಕವು ಹಾಗೆ ಅಂದುಕೊಳ್ಳುವುದು. ನಿಜಕ್ಕೂ ನೀನು ಪರಿತ್ಯಕ್ತಳಲ್ಲವೆ?

ಸೀತೆ—ಶರೀರದಿಂದಲೇ ಹೊರತು ಹೃದಯದಿಂದಲ್ಲ.

ವೇದ—ಪರಕೀಯಹೃದಯವನ್ನು ನೀನು ಹೇಗೆ ಬಲ್ಲೆ?

ಸೀತೆ—ಆತನ ಹೃದಯವೂ ಸೀತೆಗೆ ಪರಕೀಯವಾಗುವುದೆ?

ವೇದ—ಆಹಾ! ಅಪರಿತ್ಯಕ್ತೆಯೆಂದು ಎಷ್ಟೊಂದು ಪ್ರೇಮವು!

ಸೀತೆ—ಆರ್ಯಪುತ್ರನು ನನ್ನ ಸಲುವಾಗಿ ಸೇತುಬಂಧನೇ ಮೊದಲಾದ ಶ್ರಮವನ್ನು ಅನುಭವಿಸಿದನೆಂಬುದು ಸುಪ್ರಸಿದ್ಧವಾಗಿರುವಾಗ, ಮಂದ ಭಾಗಿನಿಯಾದ ನನ್ನ ವಿಷಯದಲ್ಲಿ ಆತನು ಅನುರಾಗವಿಲ್ಲದವನೆಂದು ಹೇಳಲು ಸಾಧ್ಯವೆ ?

ವೇದ—ಎಲೌ ಆತ್ಮಶ್ಲಾಘಿನಿಯೆ, ಅದು ರಾವಣನ ಮೇಲಿನ ರೋಷ ದಿಂದ ಮಾಡಿದ ಕ್ಷಾತ್ರಕರ್ಮವಲ್ಲದೆ, ಸೀತಾವಿಷಯಕವಾದ ಪ್ರೇಮ ಪಿಪಾಸೆಯಿಂದಲ್ಲ.

ಸೀತೆ—ಹಾಗಾದರೆ ಇನ್ನೊಂದು ವಿಷಯವನ್ನು ಕುರಿತು ನೀನು ಯೋಚಿಸಲಿಲ್ಲ.

ವೇದ—ಇನ್ನೊಂದಾವುದು ?

ಸೀತೆ—(ಕಿವಿಯಲ್ಲಿ) ಇದು....

ವೇದ—ಅದೇನು ಮಹಾ ?

ಸೀತೆ—(ಲಜ್ಜೆಯೊಡನೆ) ಸವತಿಯರ ನಿಟ್ಟುಸಿರಿನಿಂದ ದೂಷಿತವಲ್ಲದ ರಾಮನ ವಕ್ಷ: ಸ್ಥಳದಲ್ಲಿ ಚಿರಕಾಲ ಲಾಲಿತೆಯಾಗಿರುವೆನಲ್ಲ !

ವೇದ—ಸಖಿ, ಮರುಗಬೇಡ. ರಾಮನ ಯಜ್ಞದೀಕ್ಷಾಸಮಯವು ಸಮೀಪಿಸುತ್ತ ಬಂತು.

ಸೀತೆ—ಆದರೇನು ?

ವೇದ—ಆ ಯಜ್ಞದಲ್ಲಿ ಯಜಮಾನನಿಗೆ ಸಹಧರ್ಮಿಣಿಯ ಪಾಣಿ ಗ್ರಹಣವಾಗಬೇಕು.

ಸೀತೆ—ಆರ್ಯಪುತ್ರನ ಅಂತರಂಗದಲ್ಲಿ ನನಗೆ ಅಧಿಕಾರವಿರುವುದಲ್ಲದೆ ಹಸ್ತದಲ್ಲಿಲ್ಲ.

ವೇದ—(ಆತ್ಮಗತಂ) ಇವಳಲ್ಲಿ ನೆಲಸಿರುವ ಪ್ರೇಮವು ಶ್ಲಾಘನೀಯವು. (ಪ್ರಕಾಶಂ) ಗೆಳತಿ, ಪುತ್ರಮುಖಸಂದರ್ಶನದಿಂದಲಾದರೂ ನಿನ್ನ ಪ್ರವಾಸ ದುಃಖವು ಕಡಿಮೆಯಾಗಿಲ್ಲವೆ ?

ಸೀತೆ—ಶೋಕಪರಿಹಾರ ಹೇತುವಿನಿಂದಲೇ ಶೋಕವು ಹೆಚ್ಚಾಗುವುದು.

ವೇದ—ಅದು ಹೇಗೆ ?

ಸೀತೆ—ಹಲ್ಲುಗಳು ಮೊಳೆಯುತ್ತ ಮುದ್ದುಬೀರುವ ಮೋರೆಯ ತರಳರು ನನ್ನೊಡನೆ ಕಾರಣವಿಲ್ಲದೆ ನಗುತ್ತಿದ್ದಾಗ, ತೊದಲುಲಿಯಿಂದ

ನನ್ನನ್ನು ಕರೆದು ಮಾತನಾಡಿಸುತ್ತಿದ್ದಾಗ, ಆತನ ಸಹಜಸುಂದರವಾದ ಪ್ರೇಮಪ್ರವಾಹದಲ್ಲಿ ಮುಳುಗಿ ಓಲಾಡುತ್ತಿರುವೆನೆಂಬ ಭಾವನೆಯಾಗುತ್ತಿತ್ತು. ಈಗಲಾದರೆ, ಅವರಿಬ್ಬರೂ ಕಾಲವಶದಿಂದ ಅಭಿವೃದ್ಧಿಯನ್ನೈದಿ ಬಾಲ ಭಾವವನ್ನು ಉಳಿದು ಕೌಮಾರ್ಯವನ್ನು ತಳೆದುದರಿಂದ ನನಗೆ ಶೋಕವು ಅಧಿಕವಾಗಿ ಬಾಧೆಯು ಹೆಚ್ಚುತ್ತಿರುವುದು

ವೇದ—ಇಂತಹ ಮಕ್ಕಳ ತಾಯಿಯಾದ ಸೀತೆಯೂ ಅನುಭವಿಸ ಲಾರದ ಸಂಕಷ್ಟಕ್ಕೆ ಗುರಿಯಾದಳೆಂದ ಮೇಲೆ ಆತನ ಕ್ರೌರ್ಯವನ್ನು ಏನೆಂದು ಹೇಳಲಿ?

ಸೀತೆ—ಸಖಿ ವೇದವತಿ, ಆದರೆ ನಾನು.........(ಎಂದು ಲಜ್ಜೆಯಿಂದ ಸುಮ್ಮನಿರುವಳು.)

ವೇದ—ನಾಚಿಕೆಪಡಬೇಡ! "ಆರ್ಯಪುತ್ರನನ್ನು ನೋಡುವೆನೇ" ಎಂದು ಹೇಳು.

ಸೀತೆ—(ಸ್ವಗತಂ) ನಾಚಿಕೊಳ್ಳಲೇಕೆ? ಹೀಗೆ ಹೇಳುವೆನು (ಪ್ರಕಾಶಂ) "ಕುಶಲವರ ತಂದೆಯ ದರ್ಶನದಿಂದ ನನ್ನ ಜನ್ಮವು ಸಾರ್ಥಕವಾಗುವುದೇ" ಎಂದು.

ವೇದ—ರಾಜಸಂದರ್ಶನವು ನಿಮಗೆ ಸಮೀಪಿಸಿರುವುದು.

ಸೀತೆ—ಅದು ಹೇಗೆ?

(ನೇಪಥ್ಯದಲ್ಲಿ ತಾಪಸನು)

ಆಶ್ರಮವಾಸಿಗಳಾದ ಜನರೆಲ್ಲರೂ ಕೇಳಿಕೊಳ್ಳಬೇಕು—ಇಲ್ಲಿಗೆ ಸಮೀಪದಲ್ಲೇ ಅಶ್ವಮೇಧಮಹಾಯಜ್ಞವು ನಡೆಯಲಿರುವುದು. ಅದಕ್ಕಾಗಿ ಬೇಕಾದ ಉಪಕರಣಗಳೆಲ್ಲವೂ ಸಿದ್ಧವಾಗಿರುವುವು. ನಾನಾದೇಶದ ಆಶ್ರಮ ವಾಸಿಗಳಾದ ವಸಿಷ್ಠ ಅತ್ರಿ ಮೊದಲಾದ ಮಹಾಮುನಿಗಳು ಬಂದು ನೆರೆ ದಿರುವರು. ಮಹಾರಾಜನು ಭಗವಂತನಾದ ವಾಲ್ಮೀಕಿಯ ಬರವನ್ನೇ ಹಾರೈಸುತ್ತ ಇನ್ನೂ ಯಜ್ಞದೀಕ್ಷೆಯನ್ನು ಸ್ವೀಕರಿಸಿಲ್ಲ. ವಾಲ್ಮೀಕಿಮುನಿಯ ಆಶ್ರಮವಾಸಿಗಳನ್ನು ಕರೆಯುವುದಕ್ಕಾಗಿ ರಾಮದೂತನು ಬಂದಿರುವನು. ಆದುದರಿಂದ ನೀವು ಸ್ವಲ್ಪವಾದರೂ ಸಾವಕಾಶಮಾಡಕೂಡದು—

ಕಂದ ॥ ಇರದೆ ಪೊರಮಟ್ಟು ಮುನಿಗಳ್
ವರತೀರ್ಥೋದಕಸಮಿತ್ಕುಶಂಗಳ ಪೊರೆಯಂ।

ಧರಿಸುಗೆ! ಉಟಜಾಂಗಣದೊಳ್
ನೆರೆಯಿಕೆ ಬಾಲಿಕೆಯರೆಲ್ಲ ಮಂಗಲವಿಧಿಯಂ ॥ ೨ ॥

ಸೀತೆ— ಬೇಗನೆ ಹೊರಡಬೇಕೆಂಬ ಘೋಷಣೆಯು ಕೇಳಿದೊಡನೆ ಆರ್ಯಕಾಶ್ಯಪನು ಯಜ್ಞೋಪಕರಣಗಳನ್ನು ಹಿಡಿದುಕೊಂಡು ಮುಂದಾಗಿ ಹೊರಟಿರುವನು. ಕುಶಲವರ ಸಲುವಾಗಿ ಪ್ರಯಾಣಮಂಗಲವನ್ನು ನೆರವೇರಿಸಬೇಕಾಗಿರುವುದರಿಂದ ನಾನು ತ್ವರಿಮಾಡುವೆನು.

(ಎಂದೆಲ್ಲರೂ ಹೊರಟು ಹೋಗುವರು)

## ತೃತೀಯಾಂಕಂ

(ಬಳಿಕ ಸಲಕರಣೆಗಳೊಂದಿಗೆ ದಾರಿನಡೆದು ಬಳಲಿದ ತಾಪಸನು ಬರುವನು)

ತಾಪಸ—(ಆಯಾಸದೊಡನೆ) ಅಬ್ಬಬ್ಬ! ಸಂತಾಪಕರವಾದ ಗ್ರೀಷ್ಮಕಾಲದ ಬಿಸಿಲಿನಿಂದ ಚೆನ್ನಾಗಿ ಬಳಲಿರುವೆನು. ದಾರಿ ನಡೆದು ನಡೆದು ಬಳಲಿ ಹೋದ ಮೊಣಕಾಲುಗಳನ್ನು ಇನ್ನೂ ಊರುವುದಕ್ಕಾಗಲಿ ಎತ್ತಿಕೊಳ್ಳುವುದಕ್ಕಾಗಲಿ ನನ್ನಿಂದಾಗದು ಕಾದ ಕಾವಲಿಯಂತಾದ ನೆಲದಲ್ಲಿ ನಡೆದುದರಿಂದ ಅಂಗಾಲುಗಳಲ್ಲಿ ಬೊಕ್ಕೆಗಳೆದ್ದಿರುವುವು. ಆ ಮೃದ್ವಂಗಿಯಾದ ಸೀತೆಯೂ ಕೋಮಲಾಂಗದ ಕುಶಲವರೂ ತಾಪಸರೊಂದಿಗೆ ಸೂರ್ಯಾಸ್ತಮಾನದ ಮೊದಲೇ ನೈಮಿಷಾರಣ್ಯವನ್ನು ಸೇರಿದರಂತೆ! ಆದರೆ ನಾನಿನ್ನೂ ಕಾಡು ದಾರಿಗೇನೇ ಬಂದು ಸೇರಿಲ್ಲ. (ಚಿಂತಿಸಿ) ಈಗ ನನಗೆ ಅಲ್ಲಿಗೆ ಹೋಗುವ ದಾರಿಯನ್ನು ತೋರಿಸುವವರಾರು? (ಮುಂದೆ ನೋಡಿ) ಅದೋ ಅಲ್ಲಿ ರಾಮನು ಲಕ್ಷ್ಮಣನ ಸಹಾಯದಿಂದ ನೈಮಿಷಾರಣ್ಯಕ್ಕಾಗಿ ಹೋಗುತ್ತಿರುವನು. ನಾನೂ ಬೇಗಬೇಗನೆ ಅವರ ಹಾದಿಯನ್ನೇ ಅನುಸರಿಸುವೆನು. (ಎಂದು ತೆರಳುವನು)

### ಇಂತಿದು ಪ್ರವೇಶಕಂ

(ಬಳಿಕ ಶೋಕಪೀಡಿತನಾದ ರಾಮನೂ ಮುಂದೆ ಲಕ್ಷ್ಮಣನೂ ಪ್ರವೇಶಿಸುವರು)

ಲಕ್ಷ್ಮಣ— ಆರ್ಯನು ಹೀಗೆ ಬರಬೇಕು! (ಎಂದು ಮುಂದೆ ನಡೆಯುತ್ತ)

॥ ಉತ್ಪಲ ಮಾಲೆ ॥

ಅಂದಪರಾಧಮೊಂದಿನಿಸುಮಿಲ್ಲದೊಡಂ ರಘುವಂಶಲಕ್ಷ್ಮಿಯಂ
ಕುಂದದೆ ಘೋರಮಾದ ವಿಪಿನಾಂತರಕೊಯ್ದುಬಿಡಲ್ಕೆ ಬಂದೊಡಂ ।

ಇಂದಿನವಂಶಶೇಷನನಿಳಾಧಿಪನಂ ಕರತಂದೆನೆಂತುಮೆ
ಮ್ಮಂದಿಗರೊಂದು ಕಷ್ಟದೊಳೆ ಸಂದಕೃತಾರ್ಥನದೆತ್ತವೋದಪೆಂ ॥ ೧ ॥

ಆಹಾ! ಲೋಕದಲ್ಲಿ—

ಕಂದ ॥ ಕೆಡಿಪುದು ಗರ್ವಂ ಭಕ್ತಿಯ
ನಡಿಗೆಡಿಪುದು ಸಿರಿಯನನವಧಾನತೆಯೆಂದುಂ ।
ಕೆಡಿಪುದು ಶೋಕಂ ಧೈರ್ಯಮ
ನಡಸಿದ ದುಃಖಂ ಕೆಡಿಪ್ಪುದಾವಿನಯಮುಮಂ ॥ ೨ ॥

ಎಂಬ ನೀತಿಗೆ ಅನುಸಾರವಾಗಿ ಮಂದರಮಹೀಧರದೊಡನೆ ಸಮಾನವಾದ ಧೈರ್ಯವುಳ್ಳ ಆರ್ಯನು ಮಹಾಮಹಿಮನೆನಿಸಿದ ವಾಲ್ಮೀಕಿಮುನಿಯ ಆಗಮನವಾರ್ತೆಯನ್ನು ತಿಳಿದು ಆತನನ್ನು ಸಂದರ್ಶಿಸುವ ಸಲುವಾಗಿ ಗೋಮತೀತೀರದಲ್ಲಿರುವ ಆಶ್ರಮವನ್ನು ಕುರಿತು ಹೊರಟಿರುವನು. ಆದರೂ ಇವನೀಗ ಆ ದಿಕ್ಕನ್ನೇ ಬಿಟ್ಟು ಶೋಕಾವೇಗದಿಂದ ಪೀಡಿತವಾದ ಹೃದಯವುಳ್ಳವನಾಗಿ ಮಹಾರಣ್ಯದ ದಾರಿಯನ್ನು ಹಿಡಿದಿರುವನು. ಅದುದರಿಂದ ಈತನನ್ನೀಗ ಎಚ್ಚರಗೊಳಿಸಲೇ? ಅಥವಾ ಇವನನ್ನೇಕೆ ತಡೆಯಬೇಕು? ಮೈಮೇಲೆ ಎಚ್ಚರವಿಲ್ಲದೆ ಸಂಚರಿಸಿದರೂ ವಾಲ್ಮೀಕಿಯ ಆಶ್ರಮವನ್ನೇ ಸೇರುವ ಹಾಗೆ ನಾನೂ ಇವನನ್ನು ಅನುಸರಿಸಿ ಹೋಗುವೆನು. ಆರ್ಯನು ಇತ್ತಿತ್ತ ಬರಬೇಕು.

ರಾಮ—(ನಿಟ್ಟುಸಿರ್ಗರೆದು)

॥ ಮತ್ತೇಭವಿಕ್ರೀಡಿತ ॥

ಬರಿದಾಯ್ತಾಮಕರಾಲಯಕ್ಕೊಡನೆ ಪಟ್ಟಾ ಸೇತುಬಂಧಶ್ರಮಂ
ಬರಿದಾಯ್ತಗ್ನಿಯ ಶುದ್ಧಿಸಾಕ್ಷ್ಯಮದನುಂ ಲಕ್ಷ್ಯಕ್ಕೆ ತಂದಿರ್ದನೇ ।
ಧರಣೀನಂದನೆ ಲೋಕಮಾನ್ಯೆ ರಘುಸಂತಾನಕ್ಕೆ ತಾಯ್ವೇರಿರಲ್
ತೊರೆದೆಂ ಸೀತೆಯನೆಂದೊಡೇನೆಸಗಿದೆಂ ಮೋಹಾಂಧಕಾರಾವೃತಂ ॥ ೩ ॥

(ಮುಂದೆ ನಡೆದು) ಆಹಾ ಕಷ್ಟವೇ! ಆ ತಪಸ್ವಿನಿಗೆ ನಿರಾಲಂಬನವೆನಿಸಿದ ಪ್ರವಾಸವೆ?

ಕಂದ ॥ ಆವೆಡೆವೀಕ್ಷಿಪಳವಳಿ
ನ್ನಾವೆಡೆಗೆಯ್ದುತ್ತೆ ಬರ್ದುಕಲಾಟಿಸಿದಪಳೋ ।
ಆ ವನದೊಳ್ ಘಾತುಕಮೃಗ
ಸೇವಿತಭವನದೊಳದೆಂತು ಜನಕಜೆಯಿರವೋ ॥ ೪ ॥

ಲಕ್ಷ್ಮಣ—(ಸ್ವಗತಂ) ಇವನು ಆರ್ಯೆಯ ಪ್ರವಾಸವನ್ನೂ ಅಪತ್ಯ ವಿನಾಶವನ್ನೂ ನೆನೆದುಕೊಂಡು ಬಹಳವಾದ ಸಂತಾಪಕ್ಕೆ ಗುರಿಯಾಗಿರುವನು. ಆದುದರಿಂದ ದೇವಿಯ ವಿಚಾರವಾದ ಹಂಬಲವು ಸ್ವಲ್ಪ ಕಡಿಮೆಯಾಗುವಂತೆ ಮಾಡಲು ಬೇರೊಂದು ಸಂದರ್ಭವನ್ನು ಎತ್ತುವೆನು. (ಪ್ರಕಾಶಂ) ಆರ್ಯನು ಈ ಕಡೆಗಾಗಿ—

॥ ಗೋಮತೀ ॥

ನಿರುಕಿಸಲಿದಿರಲ್ಲಿ ಗೋಮತೀಪ್ರವಾಹಂ
ಸರಸಿಜಮಧುಗಂಧಮಂ ದಿಗಂತದತ್ತಂ ।
ಪರಪುತೆ ಕಲಹಂಸಗೀತರಮ್ಯಮೆಂತುಂ
ಮರಕತಹರಿದಂಬುಪೂರಮೇಂ ಮನೋಜ್ಞಂ ॥ ೫ ॥

ರಾಮ—(ಸ್ಪರ್ಶಸುಖವನ್ನು ಅಭಿನಯಿಸಿ)

॥ ಮಹಾಸ್ರಗ್ಧರೆ ॥

ಅವಳಂ ಬಿಟ್ಟಂದಿನಿಂದಂ ಮನಮರುಕಮನಾಗಿಪ್ಪೊಡಂ ದಕ್ಷಿಣಾಶಾ
ಪವನಂ ಶ್ರೀಗಂಧಸಾರಂ ಶಶಧರಕಿರಣಂ ತಾರಹಾರಂಗಳೆಲ್ಲಂ ।
ಪವನಂ ಬೀಸುತ್ತೆ ಬಂದೆನ್ನಯೆ ಮನಮನಿದೋ ತೋಷವೊಂದಿಪ್ಪುದೆನ್ನ
ಲ್ಕವಳಿನ್ನುಂ ಗೋಮತೀತೀರದ ವಿಪಿನದೊಳೇ ನಿಶ್ಚಯಂ ಜೀವಿಸಿರ್ಪಳ್ ॥ ೬ ॥

ಲಕ್ಷ್ಮಣ—ಇಲ್ಲಿ ನದಿಯು ಬಹುಗಂಭೀರವಾಗಿ ಹರಿಯುತ್ತಿರುವುದರಿಂದ ಆರ್ಯನು ಬಹುಜಾಗ್ರತೆಯಾಗಿ ಇಳಿಯಬೇಕು. (ಹಾಗೆಯೇ ಇಬ್ಬರೂ ಇಳಿದು ಸುತ್ತಲೂ ನೋಡಿ) ಈ ಮರಳುದಿಣ್ಣೆಯಲ್ಲಿ ಹೆಜ್ಜೆಗಳು ಸರಿಯಾಗಿ ತೋರುತ್ತಿರುವುವು. ತೀರದ ಲತೆಗಳಲ್ಲಿ ವೃಂತಗಳು ಮಾತ್ರವೇ ಉಳಿದಿರುವುವು. ಆದುದರಿಂದ ಇಲ್ಲಿಗೆ ಯಾರೋ ಬಂದು ಹೂಗಳನ್ನು ಕೊಯ್ದಿರಬೇಕು. ಚಿಗುರುಗಳನ್ನೆಲ್ಲಾ ಚಿವುಟಿರುವುದರಿಂದ ಗಿಡಗಳ ನೆರಳು ವಿರಳವಾಗಿರುವುದು. ಇಲ್ಲಿಗೆ ಸಮೀಪದಲ್ಲೇ ಯಾರೋ ವಾಸಮಾಡುತ್ತಿರಬೇಕೆಂಬುದರಲ್ಲಿ ಸಂಶಯವಿಲ್ಲ. ಹೇಗೆಂದರೆ—

॥ ಉತ್ಪಲಮಾಲೆ ॥

ಪಕ್ಕಮನೀಕ್ಷಿಸಿಲ್ಲಿ ಮಣಲೊಟ್ಟಿಲೊಳೀಗಲೆ ದೇವಪೂಜೆಯಂ
ತೆಕ್ಕನೆ ತೀರ್ಚಿಪೋಗಲದೊ ಬಾಡದೆ ತೋರ್ಪುದು ಪುಷ್ಪಸಂಚಯಂ ।

ಸಿಕ್ಕಿರೆ ಪೂರದಲ್ಲಿ ಭರದಿಂ ತೆರೆಮಾಲೆ ಪೊರಳ್ಚಿಸುತ್ತಿರಲ್
ಪಕ್ಕದೆ ಕುಂದಮಾಲೆ ಬರುತಿರ್ಪುದು ಸರ್ಪಿಣಿಯಂತೆ ಲೀಲೆಯಿಂ ॥ ೭ ॥

ರಾಮ—ಹತ್ತಿರದಲ್ಲಿ ಯಾರೋ ವಾಸಮಾಡುತ್ತಿರುವುದು ಮಾತ್ರ ವಲ್ಲ; ನದೀತೀರದ ಉದ್ದಕ್ಕೂ ಮನುಷ್ಯರ ಅಧಿವಾಸಗಳೇ ಇರಬೇಕು.

ಲಕ್ಷ್ಮಣ—ಇದೇನಾಶ್ಚರ್ಯವು! ಸಮುದ್ರಗಾಮಿನಿಯು ಸ್ವಾಮಿಯ ಚರಣಸೇವೆಯನ್ನು ಕೈಕೊಂಡಿರುವಳೆಂದು ತೋರುವ ಹಾಗೆ ಅಲೆಗಳ ಮೂಲಕ "ಕುಂದಮಾಲೆ"ಯಿಂದು ಆರ್ಯನ ಪಾದಮೂಲವನ್ನೇ ಸೋಕುತ್ತಿರುವುದು. ಇದರ ರಚನಾಕೌಶಲವು ಗಮನಿಸತಕ್ಕಂತಿರುವುದು. ಆದುದರಿಂದ ಆರ್ಯನು ಅವಲೋಕಿಸಬೇಕು. (ಎಂದು ತೆಗೆದು ಕೈಗೆ ಕೊಡುವನು)

ರಾಮ—(ಸರಿಯಾಗಿ ನೋಡಿ ಪುಲಕಿತಗಾತ್ರನಾಗಿ) ವತ್ಸ, ಈ ಕುಸುಮ ರಚನಾವಿನ್ಯಾಸಕೌಶಲವನ್ನು ಮೊದಲು ನೋಡಿರುವೆನು.

ಲಕ್ಷ್ಮಣ—ಮೊದಲೆಲ್ಲಿ?

ರಾಮ—ಇಂತಹ ಕೌಶಲವು ಬೇರೆಲ್ಲಿರುವುದು?

ಲಕ್ಷ್ಮಣ—ಏನು ದೇವಿಯಲ್ಲೋ?

ರಾಮ—ಬೇರೆಲ್ಲಿ?

ಲಕ್ಷ್ಮಣ—ಆ ವಿಧಿಹತಕನು ಹೇಗೆ ಹೇಗೆ ಆಡುತ್ತಿರುವನೆಂದು ತಿಳಿದವರಾರು? ಈ ಕುಂದಮಾಲೆಯ ಉತ್ಪತ್ತಿಸ್ಥಾನವನ್ನು ಹೇಗಾದರೂ ಹುಡುಕಿ ಕಂಡುಹಿಡಿಯಬೇಕು. ಆದುದರಿಂದ ಆರ್ಯನು ನದೀತೀರದಲ್ಲೇ ಮುಂದಕ್ಕಾಗಿ ನಡೆಯಬೇಕು.

ರಾಮ—ನಮ್ಮ ಅದೃಷ್ಟವು ಅಷ್ಟರಲ್ಲೇ ಇದೆ. ಲೋಕದಲ್ಲಿ ಒಂದು ವಸ್ತುವು ಇನ್ನೊಂದನ್ನು ಸುಲಭವಾಗಿ ಹೋಲುತ್ತಿರುವುದು. ಎಷ್ಟೋ ದೂರದಲ್ಲಿ ಪರಿತ್ಯಕ್ತಳಾದ ಸೀತೆಯ ಆಗಮನವನ್ನು ಊಹಿಸುವುದು ಸರಿಯಲ್ಲ ಆದರೂ ಮುಂದಕ್ಕೆ ದಾರಿತೋರಿಸು. ನದೀತೀರವನ್ನು ಬಿಡದೆ ಅವಳ ನೆಲೆಯನ್ನು ಹುಡುಕುತ್ತ ನಡೆಯೋಣ.

ಲಕ್ಷ್ಮಣ—ಈ ದಂಡೆಯಲ್ಲಿ ಕಲ್ಲುಮುಳ್ಳುಗಳೂ ಕಪ್ಪೆಚಿಪ್ಪುಗಳ ಚಿಪ್ಪುಗಳೂ ಗುಡ್ಡೆಗುಡ್ಡೆಯಾಗಿ ಬಿದ್ದಿರುವುದರಿಂದ ಸುಲಭವಾಗಿ ನಡೆಯಲು ಸಾಧ್ಯವಿಲ್ಲ. ನಾನು ದಾರಿ ತೋರಿಸಿದಂತೆಯೇ ಆರ್ಯನು ಮೆಲ್ಲಮೆಲ್ಲಗೆ ಬರಬೇಕು.

ರಾಮ — ಹಾಗೆಯೇ ಆಗಲಿ. ಈ ಕುಂದಮಾಲೆಯು ನನಗೆ ಬೇಕೆನಿಸುವುದಾದರೂ ದೇವತೆಗಳಿಗೆ ಉಪಹಾರವಾಗಿ ಸಮರ್ಪಿತವಾಗಿರಬಹುದೆಂಬ ಸಂಶಯವು ತೋರುತ್ತಿರುವುದರಿಂದ ಇದನ್ನು ಸ್ವೀಕರಿಸುವುದು ಸರಿಯಲ್ಲ.

(ಎಂದು ನೀರಲ್ಲೇ ತೇಲಬಿಡುವನು)

ಲಕ್ಷ್ಮಣ — ಆರ್ಯನೇ—

॥ ಉತ್ಪಲ ಮಾಲೆ ॥

ವೇತಸವಲ್ಲಿಯಂ ಬಿಡು ಪದಕ್ಕಿದೊ ಜಾಗ್ರತೆ ಚಿಪ್ಪು ತೋರ್ಪುದೋ
ವೋ ತರುಶಾಖೆ ನೀಡಿದೆ ದಿಟಂ ತಲೆವಾಗದೊಡಿಲ್ಲಿ ತಾಗುಗುಂ ।
ಕೌತುಕಮೇಕೆ ಬಿಲ್ಲಕೊನೆಯಿಂ ಸರಿಸತ್ತಲಿ ಮುಳ್ಳ ಬಲ್ಲಿಯಂ
ಕಾತರಿಪಂತೆ ಘೂರ್ಮಿಪ ಶರಾರುವಿರಾವಮನಾಲಿಸುತ್ತೆ ಬಾ ॥ ೮ ॥

ರಾಮ — (ಹಾಗೆಯೇ ಮಾಡುತ್ತ ನಡೆದು) ವತ್ಸ, ಭಗವಂತನಾದ ವಾಲ್ಮೀಕಿಯ ಆಶ್ರಮವು ಇಲ್ಲಿರುವಂತೆ ತೋರುತ್ತಿದೆ.

ಲಕ್ಷ್ಮಣ — ಆರ್ಯನಿಗೆ ಅದು ಹೇಗೆ ತಿಳಿಯಿತು ?

ರಾಮ — ವತ್ಸ, ಇಲ್ಲಿ ತಿಳಿದುಕೊಳ್ಳಲೇನೂ ಕಷ್ಟವಿಲ್ಲ. ಹೇಗೆಂದರೆ—

ಕಂದ ॥ ನಿರುಕಿಸೆ ಕಿರುವೊಗೆ ತೋರ್ದುಂ
ಪರಿಪುತ್ತಿರ್ದಂತೆ ತೋರದಪ್ಪುದು ದೆಸೆಯೊಳ್ ।
ಮರುತಂ ಕೊಂಡೈತರುತಂ
ಸುರಿವುದು ಶ್ರುತಿಗೂಡಿ ಶ್ರುತಿಗೆ ಸಾಮವನೊಲವಿಂ ॥ ೯ ॥

ಲಕ್ಷ್ಮಣ — ಆರ್ಯನು ತಿಳಿದುಕೊಂಡುದು ಸರಿಯಾಗಿರಬಹುದು. ಆದರೂ ನಾನೀಗ ಮುಂದೆ ಹೋಗಿ ನೋಡಿಕೊಂಡು ಬರುವೆನು. (ಎಂದು ಮುಂದಕ್ಕೆ ನಡೆಯುತ್ತ ಸ್ತಬ್ಧನಾಗಿ) ಇದೇನು! ಮುಂದಕ್ಕೆ ಅಡಿಯಿಡುವಾಗಲೇ ನನ್ನ ಮನವು ತಲ್ಲಣಿಸುತ್ತಿರುವುದು? ತೊಡೆಗಳು ಬರುವುದಿಲ್ಲ. ಕಾಲುಗಳು ಹಿಂಜರಿಯುತ್ತಿವೆ. ಹೀಗಾಗಲು ಕಾರಣವೇನಿರಬಹುದು? (ಯೋಚಿಸಿ) ಈ ಪ್ರದೇಶದಲ್ಲಿ ಗುರುಜನರು ವಾಸಮಾಡುತ್ತಿರಬಹುದು. ಇಲ್ಲಿ ಜನರ ಹೆಜ್ಜೆಗಳು ಕಾಣುತ್ತಿವೆ. (ಎಂದು ನೆಲವನ್ನು ದೃಷ್ಟಿಸಿ ನೋಡುವನು)

ರಾಮ — (ಸ್ವಗತಂ) ವತ್ಸನು ನೆಲವನ್ನು ಬಿಡದೆ ನೋಡುತ್ತಿರುವನು. ಅವನಿಗೆ ಅಂತಹ ಆದರವುಂಟಾಗಲು ಕಾರಣವೇನಿರಬಹುದು?

ಲಕ್ಷ್ಮಣ—ಆರ್ಯನೇ, ಈ ಮರಳುದಿಣ್ಣೆಯ ಮೇಲೆ ಅಡಿಯ ಗುರುತುಗಳು ಸರಿಯಾಗಿ ಕಾಣುತ್ತಿರುವುವು. ಇವು ಅತ್ಯಂತ ಮನೋಹರಗಳಾಗಿಯೂ ಸುಕುಮಾರಗಳಾಗಿಯೂ ಚಮತ್ಕಾರಜನಕಗಳಾಗಿಯೂ ಸಮೀಪ ಸಮೀಪಗಳಾಗಿಯೂ ಇರುವುದರಿಂದ ಸ್ತ್ರೀಯರ ಹೆಜ್ಜೆಗಳೆಂಬ ಭಾವನೆಯುಂಟಾಗುವುದು. ಆದುದರಿಂದ—

॥ ಚಂಪಕಮಾಲೆ ॥

ಸಡಗರಮೋ ಸ್ವಭಾವಮೊ ಪರಿಶ್ರಮಮೋ ಕತಮಾಗಿರಲ್ಕೆ ಮುಂ
ಗಡೆ ಮಣಲಲ್ಲಿಯೊರ್ವೆ ಕಲಹಂಸಲಸದ್ಗತಿಯಂದದಿಂದೆ ಮುಂ ।
ದಡಿಯಿಡುತಿಂತು ಮೆಲ್ನಡಿಗೆಯಿಂದಲೆ ಪೋದುದನೇಂ ಮನಕ್ಕೆ ಕ-
ನ್ನಡಿಪುವೆನಲ್ಮನೋಜ್ಞಮೆನಿಪೀ ಪದಪಙ್ತಿಗಳಂ ನಿರೀಕ್ಷಿಸಾ ॥ ೧೦ ॥

ರಾಮ—(ಸರಿಯಾಗಿ ನೋಡಿ ಸಂತೋಷದಿಂದ) ವತ್ಸ, ಯಾವಳೋ ಒಬ್ಬಾಕೆಯ ಹೆಜ್ಜೆಗಳೆಂದು ಹೇಳುವೆಯೇಕೆ? ಇವು ನಿಜವಾಗಿಯೂ ಸೀತೆಯ ಪದಪಙ್ತಿಗಳೇ ಸರಿ!

॥ ಮತ್ತೇಭವಿಕ್ರೀಡಿತ ॥

ಪದವಿನ್ಯಾಸಮದಂತೆಯೇ ನಿಭೃತಲಾಲಿತ್ಯಂ ಸಮಂ ನೋಳ್ಪೊಡಾ
ಪವರೇಖಾಕಮಲೋದ್ಭವಂ ತಿಲಕಮುಂ ತಾನಂತದೇ ನಲ್ಮೆಯಿಂ ।
ಕುದಿವೆನ್ನೀ ಮನಮಂ ಪ್ರಶಾಂತಿಗೊಳಿಸುತ್ತುಂ ಪೆರ್ಮೆಯಿಂದಿಂತು ತೋ
ರ್ಪುದರಿಂ ದೇವಿಯೆ ಬಂದುಪೋದುದನೆ ಪೇಳ್ವಂತಿರ್ಪುವೀ ಪಜ್ಜೆಗಳ್
॥ ೧೧ ॥

ಲಕ್ಷ್ಮಣ—(ಸಂತೋಷದೊಡನೆ) ಹಾಗಾದರೆ ಈ ಹೆಜ್ಜೆಗಳನ್ನೇ ಅನುಸರಿಸಿ ವಾಲ್ಮೀಕಿಮಹರ್ಷಿಗಳ ಆಶ್ರಮವನ್ನು ಸೇರೋಣ. ಈ ಗುರುತುಗಳು ಹೊಸತಾಗಿ ತೋರುವುದರಿಂದ ದೇವಿಯು ಸಮೀಪದಲ್ಲೇ ವಾಸಮಾಡುತ್ತಿರುವಂತೆ ಭಾವಿಸುವೆನು.

(ಬಳಿಕ ಸೀತೆಯು ಪ್ರವೇಶಿಸುವಳು)

ಸೀತೆ - ಗಂಗೆಯಲ್ಲಿ ಮಿಂದು ಸಂಧ್ಯೋಪಾಸನೆಯನ್ನು ನೆರವೇರಿಸಿದುದಾಯಿತು. ಭಗವತಿಯಾದ ಭಾಗೀರಥಿಗೆ ಸ್ವಹಸ್ತಗ್ರಥಿತವಾದ "ಕುಂದಮಾಲೆ"ಯನ್ನು ಸಮರ್ಪಿಸಿದೆನು. ಇನ್ನು ದಟ್ಟವಾಗಿ ಬೆಳೆದ ಬಳ್ಳಿಗಳ ಪೊದರುಗಳಿಗೆ ಹೋಗಿಅತಿಥಿಸತ್ಕಾರಕ್ಕೆ ಬೇಕಾಗಿರುವ ಹೂಗಳನ್ನು ಕೊಯ್ದು ತರುವೆನು. (ಹಾಗೆಯೇ ಹೋಗಿ ಹೂಗಳನ್ನು ಕೊಯ್ಯುವಳು)

ಲಕ್ಷ್ಮಣ—ಬರಬರುತ್ತ ಈ ಹೆಜ್ಜೆಗಳನ್ನು ದಿಣ್ಣೆಗಳು ಬಿಟ್ಟು ನೆಲ ವನ್ನು ಹೊಂದಿ ಕಾಣದಾಗುವುವು. ಆದುದರಿಂದ ಇಲ್ಲೇ ಮುಂದೆ ತೋರಿ ಬರುವ ಬಳ್ಳಿವಾಡಗಳ ಬಳಿಗೆ ಹೋಗಿ ದಣುವಾರಿಸಿಕೊಂಡ ಬಳಿಕ ವಾಲ್ಮೀಕಿಮುನಿಗಳನ್ನು ಸಂದರ್ಶಿಸಬಹುದು.

ರಾಮ—ನಿನ್ನ ಇಷ್ಟದಂತಾಗಲಿ. (ಮುಂದೆ ಹೋಗಿ ಇಬ್ಬರೂ ಕುಳಿತು ಕೊಳ್ಳುವರು.)

ರಾಮ—(ನಿಟ್ಟುಸಿರ್ಗರೆದು ಕಂಬನಿಗುಂಬಿ) ವತ್ಸ, ವತ್ಸ!

ಸೀತೆ—(ಕಿವಿಗೊಟ್ಟು ಕೇಳಿ) ಇದೇನು! ಕಾರ್ಮುಗಿಲ ಮೊಳಗಿನಂತೆ ಗಂಭೀರವಾದ ಕಂಠಧ್ವನಿಯಿಂದ ಅತ್ಯಂತ ದುಃಖಭಾಗಿನಿಯಾದ ನನ್ನ ಒಡ ಲಲ್ಲಿ ರೋಮಾಂಚವನ್ನೆಬ್ಬಿಸುತ್ತಿರುವನಲ್ಲಾ! ಯಾವಾತನಿರಬಹುದೋ ತಿಳಿಯುವೆನು! ಛೆ! ಅದು ಸರಿಯಲ್ಲ! ಸತ್ಯಾಂಶವನ್ನು ತಿಳಿಯದೆ ಯಾವುದೋ ಒಂದೆಡೆಯಲ್ಲಿ ದೃಷ್ಟಿಯನ್ನು ಬೀರುವುದೇ? ಅಥವಾ ಈ ವಿಷಯದಲ್ಲಿ ತಿಳಿಯಬೇಕಾದುದಾದರೂ ಏನಿರುವುದು? ಪರಪುರುಷನ ಕಂಠವು ರೋಮಾಂ ಚದ ಮೂಲಕ ನನ್ನ ಶರೀರವನ್ನು ಬಂಧಿಸಲಾರದು. ಆ "ನಿರನುಕ್ರೋಶ"ನೇ ಇಲ್ಲಿಗೆ ಬಂದಿರುವನೆಂಬುದರಲ್ಲಿ ಸಂಶಯವಿಲ್ಲ. ಒಮ್ಮೆ ಕಣ್ಣಾರೆ ನೋಡು ವೆನು. ಇದೇನು? ಹಾಗೆ ಪರಾಙ್ಮುಖನಾದವನ ವಿಷಯದಲ್ಲಿ ಹೀಗೆ ಅಭಿ ಮುಖಿಯಾಗುವೆನೆಂದರೆ ನಿಜವಾಗಿಯೂ ನನಗೆ ನಾನೇ ನಾಚಿಕೊಳ್ಳುವೆನು. ಆದುದರಿಂದ ನೋಡುವುದಿಲ್ಲ. (ಎಂದು ಮುಖವನ್ನು ಬೇರೊಂದು ಕಡೆಗೆ ತಿರು ಗಿಸಿ) ಏನು ಮಾಡಲಿ? ನನ್ನ ಮೇಲಣ ಅಧಿಕಾರವು ನನಗೇ ಇಲ್ಲವಲ್ಲಾ! ನನ್ನ ನೋಟವು ಬಲಾತ್ಕಾರದಿಂದ ಆ ಕಡೆಗೆ ಸೆಳೆಯಲ್ಪಡುವುದು. ಇನ್ನೇನು ಮಾಡಲಿ? ನಾನು ರಾಜನ ವಿಷಯದಲ್ಲಿ ಅಸ್ವತಂತ್ರಳಾದುದರಿಂದಲೇ ಈ ನಿಯೋಗವನ್ನು ಅನುಸರಿಸುತ್ತಿರುವೆನು. (ಹಾಗೆಯೇ ಎವೆಯಿಕ್ಕದೆ ನೋಡು ವಳು)ಆಹಾ! ನೋಡಿದೆನೆಂದು ಸಂತೋಷವು; ಚಿರಪ್ರವಾಸವೆಂದು ಕೋಪವು; ಪರಿಕ್ಷೀಣನೆಂದು ತಲ್ಲಣವು; ನಿರ್ದಾಕ್ಷಿಣ್ಯನೆಂದು ಅಭಿಮಾನವು; ಚಿರಪರಿ ಚಿತನೆಂದು ಆದರವು; ಸುಂದರನೆಂದು ಲವಲವಿಕೆಯು; ಸ್ವಾಮಿಯೆಂದು ಗೌರವವು; ಕುಶಲವರ ತಂದೆಯೆಂದು ಪಾತಿವ್ರತ್ಯಧರ್ಮವು; ಅಪರಾಧಕ್ಕೆ ಗುರಿಯಾದೆನೆಂದು ನಾಚಿಕೆಯು; ಆರ್ಯಪುತ್ರನ ಸಂದರ್ಶನದಿಂದ ನಾನು ಎಂತಹ ಅವಸ್ಥೆಯನ್ನು ಅನುಭವಿಸುತ್ತಿರುವೆನೆಂಬುದು ನನಗೇ ತಿಳಿಯದು.

ಲಕ್ಷ್ಮಣ—ಆರ್ಯನು ನನ್ನನ್ನು ಆದರದಿಂದ ಕರೆದು ತಟ್ಟನೆ ಕಂಬನಿ ಸುರಿಸುತ್ತ ಮುಖವನ್ನು ಬಾಗಿಸಿಕೊಂಡು ಸುಮ್ಮನಾಗಲು ಕಾರಣವೇನು?

ರಾಮ—ಜನಸಂಚಾರವಿಲ್ಲದ ಈ ಅರಣ್ಯವನ್ನೂ, ತೀರಗಳಲ್ಲಿ ದಟ್ಟವಾಗಿ ಬೆಳೆದಿರುವ ಮರಗಳ ನೆರಳಿನಿಂದ ತಂಪಾದ ಮರಳುದಿಣ್ಣೆಗಳನ್ನೂ, ನಿರ್ಮಲೋದಕವುಳ್ಳ ಪುಣ್ಯವಾಹಿನಿಯನ್ನೂ ನೋಡಿ ಅಂದಿನ ದಂಡಕಾರಣ್ಯವಾಸವು ನೆನಪಿಗೆ ಬಂದುದರಿಂದ ನಾನು ಹೀಗೆ ವಿಷಣ್ಣನಾಗಿರುವೆನು.

ಸೀತೆ—ಆರ್ಯಪುತ್ರ, ವನವಾಸವನ್ನು ಮಾತ್ರ ಸ್ಮರಿಸುವೆಯಲ್ಲದೆ ವನವಾಸಿನಿಯನ್ನು ಸ್ಮರಿಸುವುದಿಲ್ಲವಲ್ಲ!

ಲಕ್ಷ್ಮಣ—ದುಃಖಕ್ಕೆ ನೆಲೆಯಾಗಿದ್ದ ಆ ವನವಾಸದಲ್ಲಿ ಸ್ಮರಿಸಿಕೊಳ್ಳಲು ಯೋಗ್ಯವಾದುದಾದರೂ ಯಾವುದು?

ರಾಮ—ವತ್ಸ ಲಕ್ಷ್ಮಣ, ಇದೇಕೆ ಹೀಗೆ ಹೇಳುವೆ? ದುಃಖೈಕವಾಸವಾದ ವನವಾಸದಲ್ಲಿ ಸ್ಮರಿಸತಕ್ಕುದಾದರೂ ಯಾವುದೆಂದೊ? ನೋಡು! ನೋಡು!

॥ ಮಲ್ಲಿಕಾಮಾಲೆ ॥

ಅಂದು ಸಂಜೆಗೆ ಹ್ರಾದಿನೀತಟದಲ್ಲಿ ಸೈಕತದಲ್ಲಿ ಭೂ
ನಂದನಾಪರಿಹಾಸದೊಂದಿಗೆ ಪಾಣಿಯಂ ಗ್ರಹಿಸಿರ್ದೊಡಾಂ ।
ಮಂದಗಾಮಿನಿ ನಾಂದತೀರದೊಳಂದು ಮೆಲ್ಲನೆ ಪೋದುದಂ
ಸಂದ ಭಾಷಣದಾನಿನಾದಮನೆಂದಿಗುಂ ಮರೆವಂದಮೆ ॥ ೧೨ ॥

ಸೀತೆ—ಎಲೈ ದಯಾಶೂನ್ಯನೆ, ಮೊದಲೇ ಅನಾಥೆಯಾಗಿ ಮರುಕಕ್ಕೆ ಗುರಿಯಾಗಿರುವ ಜನವನ್ನು ಈ ಬಗೆಯ ಸಲ್ಲಾಪದಿಂದ ಮತ್ತಷ್ಟು ಬಾಧಿಸುವೆಯಾ?

ಲಕ್ಷ್ಮಣ—ಆರ್ಯನೇ, ದುಃಖಿಸಿ ಫಲವಿಲ್ಲ.

ರಾಮ—ನಿರ್ಭಾಗ್ಯನಾದ ನಾನು ಹೇಗೆ ತಾನೇ ದುಃಖಿಸದಿರಲಿ? ಗಮನಿಸಿ ನೋಡು—

ಕಂದ ॥ ಮೊದಲೊಳ್ ವನವಾಸಂ ಮ-
ತ್ತದರೊಳ್ ಲಂಕಾನಿವಾಸವಿಾಗ ಪ್ರವಾಸಂ ।
ಮುದದಿಂದಧನ್ಯನಂ ಪಡೆ
ದೊಡವಿತೆ ನಿನಗಿಂತು ಸೀತೆ ದುಃಖದೆ ದುಃಖಂ ॥ ೧೩ ॥

ಸೀತೆ - ಆರ್ಯಪುತ್ರ, ಪರಿತ್ಯಕ್ತಳಾದವಳ ವಿಷಯದಲ್ಲಿ ಇದು ಸರಿಯಲ್ಲ.

ರಾಮ — ಹಾ! ಜನಕರಾಜಪುತ್ರಿ!

ಸೀತೆ — ಅಲ್ಪಪುಣ್ಯಭಾಗಿನಿಯ ವಿಷಯವನ್ನು ಬಿಟ್ಟುಬಿಡಬೇಕು.

ರಾಮ — ಹಾ! ವನವಾಸಸಹಾಯಿನಿ!

ಸೀತೆ — ಇದು ಕೂಡ ಸರಿಯಲ್ಲವಷ್ಟೆ!

ರಾಮ — ಆಹಾ! ನೀನೆಲ್ಲಿ ಹೋಗಿರುವೆ?

ಸೀತೆ — ಅದೃಷ್ಟವಿಲ್ಲದವಳು ಮತ್ತೆಲ್ಲಿ ಹೋಗುವಳು?

ರಾಮ — ನನಗೆ ಪ್ರತ್ಯುತ್ತರವನ್ನು ಕೊಡು.

ಸೀತೆ — ನಂಬಿಕೆಯಿಲ್ಲದವರಲ್ಲಿ ಪ್ರತ್ಯುತ್ತರವೇನು?

(ರಾಮನು ವಿಶೇಷವಾಗಿ ದುಃಖಿಸುವನು)

ಲಕ್ಷ್ಮಣ — ಆರ್ಯನೇ, ಮರುಕದಿಂದ ಪ್ರಯೋಜನವಿಲ್ಲವೆಂದು ವಿಜ್ಞಾಪಿಸಿಕೊಳ್ಳುತ್ತಿರುವೆನಲ್ಲಾ!

ರಾಮ — ಶೋಚನೀಯಳಾದ ವೈದೇಹಿಯ ಸಲುವಾಗಿ ಹೇಗೆ ತಾನೇ ಶೋಕಿಸದಿರಲಿ?

ಸೀತೆ — ಆರ್ಯಪುತ್ರ, ವೈದೇಹಿಯು ಶೋಚನೀಯಳೆಂದು ನೀನು ಎಂದೆಂದಿಗೂ ಹೇಳಬಾರದು. ಯಾರ ಸಲುವಾಗಿ ಪ್ರಿಯನು ಹೀಗೆ ಮರುಗುವನೋ ಅವಳು ಹಾಗೆ ಶೋಚನೀಯಳಲ್ಲವಷ್ಟೆ?

ರಾಮ — ವತ್ಸ ಲಕ್ಷ್ಮಣ, ಎಲ್ಲಿರುವಳೆಂದು ತಿಳಿಯುವುದಕ್ಕಾದರೂ ಸಾಧ್ಯವೆ?

ಸೀತೆ — ದಿವಸಾವಸಾನದಲ್ಲಿ ಅಗಲಿದ ಚಕ್ರವಾಕೆಯಂತೆ ಇಲ್ಲಿಯೇ ಪ್ರವಾಸವನ್ನು ಅನುಭವಿಸುತ್ತಿರುವಳು.

ಲಕ್ಷ್ಮಣ — ಹೇಗೆ ತಿಳಿಯಬೇಕು?

ರಾಮ — ಎಷ್ಟೋ ಕಾಲದಿಂದ ಅವಿಚ್ಛಿನ್ನವಾಗಿದ್ದ ರಘುಕುಲವು ನನ್ನಿಂದ ಹಾಳಾಯಿತಲ್ಲಾ! (ಎಂದು ಅಳುವನು)

ಸೀತೆ — (ಶೋಕದೊಡನೆ) ಆರ್ಯಪುತ್ರನು ಮಿತಿಮೀರಿ ಮರುಗುತ್ತಿರುವನು. ಈಗ ನಾನೇನುಮಾಡಲಿ? ತಟ್ಟನೆ ಹೋಗಿ ನೋಟವನ್ನು ನಿರೋಧಿಸುವ ಅಶ್ರುಪ್ರವಾಹವನ್ನು ಒರಸಿಕೊಳ್ಳುವೆನು. (ಎಂದು ಮುಂದಕ್ಕೆ ಜಾರಿ

ಯಿಟ್ಟು) ಅಥವಾ ಜನರ ನಿಂದೆಗೆ ಒಳಗಾಗದಂತೆ ನಾನು ನನ್ನನ್ನು ಕಾಪಾಡಿ ಕೊಳ್ಳಬೇಕು. ಆರ್ಯಪುತ್ರನ ದೃಷ್ಟಿಗೆ ಗೋಚರಿಸಿದರೆ ದುಃಖದ ಭರ ದಿಂದ ಮೈಮರೆತು ಪರತಂತ್ರಳಾಗುವೆನು. ಇಲ್ಲಿ ಮುನಿಜನರು ಗುಂಪು ಗುಂಪಾಗಿ ಬಂದು ಸೇರುವುದುಂಟು. ಅಕಸ್ಮಾತ್ತಾಗಿ ಯಾರಾದರೂ ನನ್ನನ್ನು ಕಂಡರೂ ಕಾಣಬಹುದು. ಆದುದರಿಂದ ಲತಾಜಾಲವು ಕವಿದಿರುವ ಈ ದಾರಿಯಿಂದ ಸುಖವಾಗಿ ಹೋಗಿ ಆಶ್ರಮದಲ್ಲಿರುವ ಕುಶಲವರನ್ನು ಮನ್ನಿಸು ವೆನು. (ಎಂದು ರಾಮನನ್ನೇ ನೋಡುತ್ತ ತೆರಳುವಳು)

(ಬಳಿಕ ಋಷಿಯು ಬರುವನು)

ಋಷಿ—ಭಗವಂತನಾದ ವಾಲ್ಮೀಕಿಯು ಹೀಗೆ ಆಜ್ಞಾಪಿಸಿರುವನು— ವತ್ಸ! ಬಾದರಾಯಣ, ರಾಮಭದ್ರನು ಲಕ್ಷ್ಮಣನೊಂದಿಗೆ ಈ ತಪೋವನಕ್ಕೆ ಬಂದಿರುವನೆಂದು ನಾನು ಕೇಳಿದೆನು. ನಾನು ಮಾಧ್ಯಾಹ್ನಿಕಕೃತ್ಯಗಳಲ್ಲಿ ನಿರತನಾಗಿರುವೆನೆಂದು ತಿಳಿದುಕೊಂಡು ಆತನು ಹೊರಗೇ ನಿಂತಿರಬಹುದು. ಆದುದರಿಂದ ನೀನು ಅವನ ಬಳಿಗೆ ಹೋಗಿ, ನಾನು ಮಾಧ್ಯಾಹ್ನಿಕಕಾರ್ಯ ಗಳನ್ನು ನಿರ್ವಹಿಸಿ ಅವನ ದರ್ಶನವನ್ನೇ ಇದಿರುನೋಡುತ್ತಿರುವೆನೆಂದು ಆತನೊಡನೆ ಅರಿಕೆಮಾಡು" ಎಂದು. ಆದುದರಿಂದ ನಾನು ಭಗವಂತನಾದ ವಾಲ್ಮೀಕಿಯ ಆಜ್ಞೆಯ ಮೇರೆಗೆ ರಾಮನನ್ನೇ ಹುಡುಕಿ ನೋಡುವೆನು. (ಎಂದು ಸುತ್ತಲೂ ನೋಡುತ್ತ ನಡೆದು ಬರುವನು)

ಲಕ್ಷ್ಮಣ—(ನೋಡಿ ಸಂಭ್ರಮದಿಂದ) ಆರ್ಯನೇ, ಈ ತಪೋಧನನು ಇತ್ತಲೇ ದಯಮಾಡುತ್ತಿರುವನು.

(ರಾಮನು ಕಂಬನಿಯನ್ನು ಒರಸಿ ಧೈರ್ಯವನ್ನು ತಂದುಕೊಂಡು ಕುಳಿತುಕೊಳ್ಳುವನು)

ಋಷಿ—(ಸರಿಯಾಗಿ ಹುಡುಕಿನೋಡಿ) ಓಹೋ ಬಳ್ಳಿಯ ಪೊದರು ಗಳಿಂದ ನಿಬಿಡವಾದ ಈ ನೆರಳಲ್ಲಿ ಪುರುಷರಿಬ್ಬರು ಕುಳಿತಿರುವಂತಿದೆ. ಒಂದು ವೇಳೆ ಲಕ್ಷ್ಮಣನೊಡಗೂಡಿ ಬಂದಿರುವ ರಾಮನೇ ಆಗಿರಬಹುದೋ ? ಏನೋ ? (ಯೋಚಿಸಿ) ಆ ವಿಷಯದಲ್ಲಿ ಸಂದೇಹವಿಲ್ಲ—

॥ ಶಾರ್ದೂಲವಿಕ್ರೀಡಿತ ॥

ಇಲ್ಲೀ ಕೇಸರಿಯೊಂದಿಗಿಂತು ಹರಿಣಂ ನಿಃಶಂಕೆಯಿಂ ಸುತ್ತುಗುಂ
ಮೆಲ್ಲಂ ಮೆಲ್ಲನೆ ಗಾಳಿ ಬೀಸುವುದು ನಾತ್ಯುಷ್ಣಂ ನಿದಾಘಾತಪಂ ।
ವಲ್ಲೀಗುಲ್ಮದ ಮೂಲಮೊಂದದು ನೆರಲ್ಮಧ್ಯಾಹ್ನಕಾಲಕ್ಕವಿಂ
ತಿಲ್ಲೀ ಕಾನನದಲ್ಲಿರಲ್ ಹರಿಯಿವಂ ರಾಮಾಭಿಧಾನಂ ವಲಂ ॥ ೧೪ ॥

ಲೋಕೋತ್ತರವಾದ ಮಹಿಮೆಯಿಂದ ಮಾತ್ರವೇ ಅಲ್ಲ; ಆಕಾರದಿಂದಲೂ ನಿಶ್ಚೈಸಿಕೊಳ್ಳಲು ಸಾಧ್ಯವಿದೆ. (ಸರಿಯಾಗಿ ಭಾವಿಸಿನೋಡಿ)

ಕಂದ ॥ ವ್ಯಾಯಾಮಕಠಿನನಾಶ್ರು-
ತ್ಯಾಯತಲೋಚನನೆನಲ್ಕೆ ವ್ಯೂಢೋರಸ್ಕಂ ।
न्ಯಾಯಂ ದಶರಥಸುತನ
ತ್ಯಾಯತದೃಢಬಾಹುದಂಡನುನ್ನತಸೀತಂ ॥ ೧೫ ॥

ಆದುದರಿಂದ ನಾನು ಈತನ ಸಮೀಪಕ್ಕೆ ಹೋಗಿ ಸಂಗತಿಯನ್ನು ತಿಳಿಸಿಕೊಳ್ಳುವೆನು. (ಎಂದು ಸಮೀಪಕ್ಕೆ ಹೋಗಿ) ರಾಜನಿಗೆ ಮಂಗಳವಾಗಲಿ!

ರಾಮ—(ಪಕ್ಕನೆ ಎದ್ದು ನಿಂತು) ಪೂಜ್ಯರೇ, ಅಭಿವಂದಿಸುವೆನು.

ಋಷಿ—ಜಯಶಾಲಿಯಾಗು!

ರಾಮ—ತಾವು ಇಲ್ಲಿಗೆ ದಯಮಾಡಿಸಲು ಕಾರಣವೇನು?

ಋಷಿ—ಭಗವಂತನಾದ ವಾಲ್ಮೀಕಿಯು ಮಾಧ್ಯಾಹ್ನಿಕಕರ್ಮಗಳನ್ನು ತೀರಿಸಿಕೊಂಡು ಮಹಾರಾಜನ ಆಗಮನವನ್ನೇ ನಿರೀಕ್ಷಿಸುತ್ತಿರುವನು.

ರಾಮ—(ನೋಡಿ) ಓಹೋ! ಮಧ್ಯಾಹ್ನವು ದಾಟುತ್ತ ಬಂತು. ಹೇಗೆಂದರೆ—

ಕಂದ ॥ ತರುಮೂಲಮನೊಂದಿಯೆ ಪರಿ
ಹರಿಸುತೆ ನಡುವಗಲ ತಡೆಯಲಾರದ ಬಿಸಿಲಂ ।
ಮರದ ನೆರಲೀಗ ಮೆಲ್ಲನೆ
ಪೊರಮಡುತಿರ್ದಪ್ಪುದಿಲ್ಲಿ ಪಥಿಕನ ತೆರದಿಂ ॥ ೧೬ ॥

ಅಷ್ಟುಮಾತ್ರವಲ್ಲದೆ —

॥ ಮತ್ತೇಭವಿಕ್ರೀಡಿತ ॥

ಸುಡುತಿರ್ಪಾತಪದುಷ್ಣಮಂ ಕಳೆಯಲೆಂದೈತಂದ ವನ್ಯದ್ವಿಪಂ
ಮಡುವಂ ಪೊಕ್ಕಿರ್ದೆಯಿಂದೆನೂಂಕಿಜಲಮಂಶುಂಡಾಗ್ರದಿಂಪೊಯ್ದುಘೀ।
ಳಿಡಲೆಳ್ತರ್ಪ ತರಂಗಮಾಲೆಗಳೊಡಂ ಮುಳ್ಕಾಡಿ ಮೇಲೆಳ್ದು ಮು-
ನ್ನಡೆಗುಂ ದಂಡೆಯೊಳಾರ್ದ್ರಕರ್ಣಪವನಂ ತಾಂ ಮೆಲ್ಲನಾನಂದದಿಂ॥೧೭॥

(ಎಂದೆಲ್ಲರೂ ತೆರಳುವರು)

## ಚತುರ್ಥಾಂಕಂ

(ಬಳಿಕ ತಾಪಸಿಯರಿಬ್ಬರು ಪ್ರವೇಶಿಸುವರು)

ವೇದವತಿ - ಎಲೆ ಯಜ್ಞವೇದಿ, ರಾಮಾಯಣಸಂಗೀತದ ಸಲುವಾಗಿ ವಾಲ್ಮೀಕಿಯ ಆಶ್ರಮಕ್ಕೆ ಬಂದ ತಿಲೋತ್ತಮೆಯು ನನ್ನೊಡನೆ — "ನಾನೀಗ ಸ್ವಪ್ರಭಾವದಿಂದಲೇ ಸೀತೆಯ ಆಕೃತಿಯನ್ನವಲಂಬಿಸಿ ರಾಮನ ಕಣ್ಣಿಗೆ ಕಾಣಿಸಿಕೊಂಡು ಅವನು ಸೀತೆಯ ವಿಷಯದಲ್ಲಿ ಕನಿಕರವುಳ್ಳವನೋ, ಅಲ್ಲವೋ ಎಂಬುದನ್ನು ತಿಳಿಯಬೇಕೆಂದಿರುವೆನು. ಆದುದರಿಂದ ಈಗ ರಾಮನು ಎಲ್ಲಿರಬಹುದೆಂದು ಹುಡುಕಿಬಂದು ತಿಳಿಸಬೇಕು" ಎಂದು ಹೇಳಿರುವಳು. ಅದಕ್ಕಾಗಿ ನನಗೆ ರಾಮನ ವಿಶ್ರಾಂತಿಸ್ಥಾನವನ್ನು ಪ್ರಿಯಸಖಿಯಾದ ನೀನು ತೋರಿಸಬೇಕು.

ಯಜ್ಞವೇದಿ — ಎಲೆ ವೇದವತಿ, ಈ ವಿಷಯವಾಗಿ ತಿಲೋತ್ತಮೆಯು ಮಾತನಾಡುತ್ತಿದ್ದಾಗ ಸಮೀಪದ ಲತಾಭವನದ ಹಿಂದೆ ಅಡಗಿಕೊಂಡಿದ್ದ ರಾಮನ ಪ್ರಿಯಮಿತ್ರನಾದ ಆರ್ಯಹಸಿತನು ಅದೆಲ್ಲವನ್ನೂ ಸಂಪೂರ್ಣವಾಗಿ ಕೇಳಿ ತಿಳಿದುಕೊಂಡನು.

ವೇದವತಿ — ಹಾಗಾದರೆ ಕೆಲಸವು ಕೆಟ್ಟುಹೋದಂತೆಯೇ. ಈ ಗುಟ್ಟನ್ನು ತಿಳಿದ ರಾಮನ ಮುಂದೆ ತಿಲೋತ್ತಮೆಯು ಸೀತೆಯ ವರ್ತನೆಗಳನ್ನು ಅನುಕರಣೆಮಾಡಿ ವಿಶೇಷವಾದ ಪರಿಹಾಸಕ್ಕೆ ಗುರಿಯಾಗಬಹುದೆಂಬುದರಿಂದ ಗೆಳತಿಯಾದ ಅವಳೊಡನೆ ಹಾಗೆ ಮಾಡಬೇಡವೆಂದು ಬೇಡಿಕೊಳ್ಳುವೆನು.

ಯಜ್ಞವೇದಿ — ಸಖಿ ವೇದವತಿ! ಈಗ ಸೀತೆಯೆಲ್ಲಿರುವಳು ?

ವೇದವತಿ — ಕೇಳು! ಏಳು ದಿನಗಳ ಹಿಂದೆ ತಪೋವನದ ಹೆಂಗುಸರೆಲ್ಲರೂ ಒಟ್ಟು ಸೇರಿ ಭಗವಂತನಾದ ವಾಲ್ಮೀಕಿಯ ಸನ್ನಿಧಿಗೆ ಹೋಗಿ "ಮಹಾರಾಜನು ಆಶ್ರಮದ ಕಮಲಾಕರಗಳಲ್ಲಿ ತನ್ನ ಉಪಭೋಗದ ಸಲುವಾಗಿ ತಾವರೆಗಳನ್ನು ಕೊಯ್ಯುವುದೇ ಮುಂತಾದ ಕಾರ್ಯಗಳಲ್ಲೇ ಆಸಕ್ತನಾಗಿರುವುದರಿಂದ ಅಲ್ಲಿ ಪರಪುರುಷರ ಕಣ್ಣಿಗೆ ಬೀಳದಂತೆ ಸ್ನಾನಮಾಡುವುದು ಕಷ್ಟಕರವಾಗಿದೆ" ಎಂದು ಬಿನ್ನೈಸಿಕೊಂಡರು. ಆಗ ಭಗವಂತನಾದ ವಾಲ್ಮೀಕಿಯು ಒಂದು ಮುಹೂರ್ತಕಾಲ ಮೌನದಿಂದ ಕಣ್ಣುಮುಚ್ಚಿ ಧ್ಯಾನಮಾಡಿ "ಈ ಕೊಳದಲ್ಲಿರುವ ಸ್ತ್ರೀಯರು ಪುರುಷರ ದೃಷ್ಟಿಗೆ ಕಾಣಿಸ

ಲಾರರು” ಎಂದು ಹೇಳಿದನು. ಅಂದಿನಿಂದ ಸೀತೆಯು ರಾಮನಿಗೆ ಕಾಣಿಸ ದಂತೆ ಕೊಳದ ತೀರದಲ್ಲೇ ಹಗಲೆಲ್ಲಾ ಸಮಯವನ್ನು ಕಳೆಯುತ್ತಿರುವಳು.

ಯಜ್ಞವೇದಿ—ಆ ಕುಶಲವರು ರಾಮನಿಗೂ ತಮಗೂ ಇರುವ ಸಂಬಂಧವನ್ನು ಅರಿತಿರುವರೇನು?

ವೇದವತಿ—ಅವರು ಹುಡುಗತನದಿಂದಲೂ ಮುನಿಜನರ ಸಂಸರ್ಗ ದಿಂದಲೂ ಹೆತ್ತ ತಾಯಮ್ಮನ ಹೆಸರನ್ನೇ ತಿಳಿಯದಿರುವರು. ಹೀಗಿರಲು ದೀರ್ಘಪ್ರವಾಸವಿಚ್ಛಿನ್ನವಾದ ರಾಮನ ವೃತ್ತಾಂತವನ್ನಾದರೂ ತಿಳಿದು ಕೊಳ್ಳುವ ಬಗೆ ಹೇಗೆ?

ಯಜ್ಞವೇದಿ— ರಾಮನು ತಪೋವನವನ್ನು ಪ್ರವೇಶಿಸಿದ ಸಮಾಚಾರ ವನ್ನು ನೀನಾದರೂ ಬಲ್ಲೆಯಾ?

ವೇದವತಿ—ನಾನು ತಿಳಕೊಳ್ಳುವ ಬಗೆ ಹೇಗೆ?

ಯಜ್ಞವೇದಿ—ಆಗಲಿ. ನೀನು ತಿಲೋತ್ತಮೆಯ ಸಮೀಪಕ್ಕೆ ಹೋಗು. ನಾನೂ ಹೋಗಿ ಸೀತೆಯ ಬಳಿಸೇರುವೆನು (ಎಂದು ಹೊರಟು ಹೋಗುವರು)

## ಇಂತಿದು ಪ್ರವೇಶಕಂ

(ಬಳಿಕ ತಲೆಗೆ ಮುಸುಕುಹಾಕಿದ ಸೀತೆಯೂ ಯಜ್ಞವತಿಯೂ ಪ್ರವೇಶಿಸುವರು.)

ಯಜ್ಞವತಿ—ಸಖಿ ವೈದೇಹಿ, ಅಪೂರ್ವವಾದ ಉತ್ತರೀಯಯುಗಲ ವನ್ನು ಧರಿಸಿಕೊಳ್ಳಬೇಕೆಂದು ನಿನಗೆ ಉಪದೇಶಿಸಿದವರಾರು?

ಸೀತೆ—ಕೊಳದ ಅಲೆಗಳ ಮೇಲಿಂದ ತಂಪಾಗಿ ಬೀಸುವ ಗಾಳಿಯು.

ಯಜ್ಞ—ಸಖಿ! ಶರತ್ಕಾಲದ ಬೆಳದಿಂಗಳಂತೆ ಬಹುಪರಿಶುದ್ಧವೂ ಮುಗಮುಗಿಸುತ್ತಿರುವುದರಿಂದ ಮುತ್ತುವ ಅಲಿಮಾಲಿಗಳ ಗುಂಜಾರವದಿಂದ ಮನೋಹರವೂ ಆಗಿರುವ ಇಂತಹ ಪ್ರಾವರಣವನ್ನು ಧರಿಸುವುದು ಪ್ರವಾ ಸಕ್ಕೆ ವಿರುದ್ಧವಲ್ಲವೆ?

ಸೀತೆ—ಸಖಿ! ಮಹಾರಾಜರ ಅನುಜ್ಞೆಯ ಮೇರೆಗೆ ನಾವು ಚಿತ್ರ ಕೂಟದಲ್ಲಿ ಚಿರಕಾಲ ವನವಾಸವನ್ನು ಅನುಭವಿಸುತ್ತಿದ್ದೆವು. ಅಲ್ಲಿ ಮಾಯಾ ವತಿಯೆಂಬ ವನದೇವತೆಯು ನನ್ನೊಡನೆ ಅಚ್ಚುಮೆಚ್ಚಿನ ಗೆಳತಿಯಂತೆ ಸೌಹಾರ್ದವುಳ್ಳವಳಾಗಿದ್ದಳು. ನಾವು ಅಲ್ಲಿಂದ ಮುಂದಣ ದಕ್ಷಿಣಾಪಥಕ್ಕೆ

ಹೊರಡುವ ವೇಳೆಗೆ ಅವಳು ಬಹು ಚಿಂತಾಕುಲೆಯಾಗಿ ಚಂದ್ರಧವಳವೆನಿಸಿ ಪರಿಮಳವನ್ನು ಬೀರುವ ದಿವ್ಯವಾದ ತನ್ನ ಉತ್ತರೀಯವನ್ನು ಜ್ಞಾಪಕಾರ್ಥ ವಾಗಿ ನನಗೆ ಕೊಟ್ಟಳು. ಅದು ಆರ್ಯಪುತ್ರನ ಹಾಗೂ ನನ್ನ ಕೈಗಳಲ್ಲಿ ಬಹುಕಾಲದವರೆಗೂ ಪ್ರಿಯವಾಗಿದ್ದುದರಿಂದ ಚಿರದುಃಖಸಹಾಯವೆಂದು ತಿಳಿದುಕೊಂಡು ಇದನ್ನಿಂದು ಆದರದಿಂದ ಧರಿಸಿಕೊಂಡಿರುವೆನು. (ಎಂದು ಹೇಳುತ್ತ ರೋದಿಸುವಳು)

ಯಜ್ಞ — ಸಖಿ, ಅಳಬೇಡ. ಈ ತಪೋವನವಾಸವನ್ನು ವನವಾಸ ವೆಂದು ಹೇಳಬಹುದೇ ?

ಸೀತೆ — ಹೇಗೆ ತಾನೇ ಅಳದಿರಲಿ? ಆರ್ಯಪುತ್ರನು ಈ ತಪೋ ವನಕ್ಕೆ ಬಂದಿರುವನೆಂದು ಇಮ್ಮಡಿಯಾಗಿರುವ ಶೋಕದ ಭಾರವನ್ನು ಸಹಿಸಿ ಕೊಳ್ಳಲಾರೆನು. ಏಕಾಕಿನಿಯಾಗಿ ನಿಟ್ಟುಸಿರುಗಳಿಂದಲೇ ಹಗಲಿರುಳು ಗಳನ್ನು ಕಳೆಯುತ್ತಿರುವೆನು. ಇದು ಮನಸ್ಸಿನ ಆವೇಗಕ್ಕೆ ಪ್ರಬಲವಾದ ಕಾರಣವಲ್ಲವೆ ?

ಯಜ್ಞ — ಇಂತಹ ವ್ಯಸನಗಳನ್ನು ಹೇಗಾದರೂ ಸಹಿಸಿಕೊಳ್ಳಬೇಕು. ನೀನೀಗ ಈ ಕೊಳದ ದಡದಲ್ಲಿದ್ದು ವಿಹಂಗಮಮಿಥುನವಿಭ್ರಮವನ್ನು ನೋಡುತ್ತಾ ಮನಸ್ಸನ್ನು ಸಮಾಧಾನಪಡಿಸುತ್ತಿರು. ನಾನೂ ನನ್ನ ಕರ್ತವ್ಯ ವನ್ನು ನೆರವೇರಿಸುವೆನು. (ಎಂದು ಮುಂದಕ್ಕೆ ನಡೆಯುವಳು)

ಸೀತೆ — (ಕಮಲಾಕರವನ್ನು ನೋಡಿ) ವಿರಹದ ನೋವನ್ನು ಅನುಭವಿಸದೆ ಸದಾ ಜೊತೆಯಾಗಿಯೇ ಇದ್ದು ಸುಖವನ್ನನುಭವಿಸುವ ಈ ರಾಜಹಂಸ ಮಿಥುನವು ಧನ್ಯವೇ ಸರಿ. ದಂಪತಿಗಳಿಗೆ ವಿರಹಸಮನೆನಿಸುವ ಉಪದೇಶ ನಿಪುಣನಾದ ಉಪಾಧ್ಯಾಯನು ಮತ್ತೆಲ್ಲಿಯೂ ಇರುವುದಿಲ್ಲ. ಪಕ್ಷಿಗಳು ಕೂಡ ಪರಸ್ಪರವಾಗಿ ಮನೋವೃತ್ತಿಗಳನ್ನು ತಿಳಿದು ಲಲಿತಮಧುರವಾದ ರೀತಿಯಿಂದ ಪ್ರಿಯಸಲ್ಲಾಪಗಳನ್ನು ನಡೆಯಿಸುತ್ತ ಸಂತೋಷದಿಂದ ಕಾಲ ಕಳೆಯುತ್ತಿರುವುವು.

ಯಜ್ಞ — (ಸರಿಯಾಗಿ ನೋಡಿ) ಓಹೋ! ಮುನಿಜನರೆಲ್ಲರೂ ಒಮ್ಮೆಯೇ ತಮ್ಮತಮ್ಮ ಆಸನಗಳನ್ನು ಬಿಟ್ಟು ಶಿಷ್ಯರ ಹೆಗಲ ಮೇಲೆ ನಾರುಮಡಿಗಳನ್ನು ಹೊರಿಸಿಕೊಂಡು ಎವೆಯಿಕ್ಕದೆ ನೋಡುತ್ತ ಗುಂಪುಗುಂಪಾಗಿ ಒಂದೇ ಕಡೆ ಗಾಗಿ ಸಾಗುತ್ತಿರುವರು. ಆದುದರಿಂದ ಮಹಾರಾಜನು ದಯಮಾಡಿಸಿರುವ ನೆಂದು ತೋರುತ್ತದೆ. (ಎಂದು ಹೋಗುವಳು)

(ಬಳಿಕ ಚಿಂತಾಕ್ರಾಂತನಾದ ರಾಮನೂ ಕಣ್ವನೂ ಪ್ರವೇಶಿಸುವರು)

ಕಣ್ವ—"ಕಣ್ವನೇ, ನೈಮಿಷಾರಣ್ಯದ ಸೊಬಗನ್ನು ತೋರಿಸುವುದರ ಮೂಲಕ ದಾಶರಥಿಯ ಮನಸ್ಸನ್ನು ವಿನೋದಗೊಳಿಸು" ಎಂಬುದಾಗಿ ಭಗವಂತನಾದ ವಾಲ್ಮೀಕಿಯು ನನಗೆ ಆಜ್ಞಾಪಿಸಿರುವನು. ಈತನು ಚಿಂತಾಪರವಶನಾಗಿರುವುದರಿಂದ ಇದಿರಲ್ಲಿರುವ ನನ್ನನ್ನು ಕೂಡ ತಿಳಿಯದಿರುವನು. ಅದು ಹೇಗೆಂದರೆ—

ಕಂದ ॥ ಎಡವುತೆ ಸಮಮಾರ್ಗದೊಳಂ
ತಡೆಯುತ್ತುಂ ದೂರದಲ್ಲಿ ಮೆಲ್ಲನೆ ನಡೆವಂ ।
ಕಡುಚೆಲ್ವಿನ ಕಾನನಮ
ಪ್ಪೊಡಮಿದನೀಕ್ಷಿಸದೆ ಬರಿದೆ ತಲೆವಾಗಿರ್ಪಂ ॥ ೧ ॥

(ಸಮೀಪಕ್ಕೆ ಬಂದು) ಅಯ್ಯಾ! ರಾಜನೆ!

ರಾಮ—ಮಿತ್ರನೆ, ಇದು ತಾಪಸವಿರುದ್ಧವಾದ ಆಹ್ವಾನವು. ಅಥವಾ ವಯಸ್ಸಿನ ಪರಿಪಾಕದಿಂದ ಭಗವಂತನ ಅಪರಾಧವೇನೂ ಇಲ್ಲ.

ಕಂದ ॥ ನಿನಗಾಂ ರಾಮಂ ಬಾಲ್ಯದೊ
ಳೆನಗಂ ನೀಂ ಕಣ್ವನೆಂದು ಮೆರೆದಿರ್ದೆವಲೇ ।
ಇನಿತು ವಯಃಪರಿಣಾಮದ
ನೆನಸಿಂದಲೆ ರಾಜನಾರ್ಯರಾದೆವು ತಪ್ಪೇಂ ॥ ೨ ॥

ಕಣ್ವ—ಆಹಾ! ಈ ಉಪಾಲಂಭವು ಎಷ್ಟು ಧೀರೋದಾತ್ತವಾಗಿರುವುದು.

ರಾಮ—ಹೇಳಬೇಕೆಂದು ಬಯಸಿದುದನ್ನು ತಡೆಯಿಲ್ಲದೆ ಹೇಳಬಹುದಲ್ಲ!

ಕಣ್ವ— ॥ ತರಳೆ ॥

ಸುರಭಿಪುಷ್ಪಸುಗಂಧದಿಂ ನೆರೆ ತುಂಬಿಸುತ್ತೆ ದಿಗಂತಮಂ
ನಿರುಕಿಸಲ್ಫಲಭಾರದಿಂ ಬಳುಕಿರ್ಪ ಪಾದಪವೃಂದದಿಂ ।
ಪರಿಧಿಯಂದದೆ ನೀಲವರ್ಣದಿನೊಪ್ಪುವೀ ವನರಾಜಿಯುಂ
ಪೊರೆಯದೇ ನಿನತಂತರಂಗಮನೊಂದಿಸುತ್ತತಿಮೋದಮಂ ॥ ೩ ॥

ರಾಮ—ನನ್ನ ಅಂತರಂಗದಲ್ಲಿ ಪೂಜ್ಯಬುದ್ಧಿಯು ತುಂಬಿ ತುಳುಕುತ್ತಿರುವುದರಿಂದ ಈ ತಪೋವನವು ಮನೋಹರವಾಗಿದೆಯೋ ಇಲ್ಲವೋ ಎಂದು ಹೇಳುವುದಕ್ಕೂ ಅವಕಾಶವಿಲ್ಲದಿರುವುದು. ನೋಡು—

॥ ಚಂಪಕಮಾಲೆ ॥

ಸರಿವೊಡೆ ಕಾಲ್ಗಳೊಲ್ಲದೊಡವಿಗಾ ಗುರುಸೀಮೆಯೊಳ್ಮೈದಿ ಕಷ್ಟದಿಂ
ನಿರುಕಿಸಲೆನ್ನ ಚಿತ್ತಕತಿಭಕ್ತಿಯ ಭಾವದೆ ತೋರ್ಪುದಿಂತು ದ- ।
ಳ್ಳುರಿವ ದವಾಗ್ನಿ ಯಾಗದನಲಂ ತರುಸಂತತಿ ಯೂಪರಾಜಿ ಪಿ-
ಕ್ಕರುತಿ ದಿವ್ಯಸಾಮನಿನದಂ ಮೃಗಸಂದಣಿ ತಾಪಸವ್ರಜಂ ॥ ೪ ॥

ಕಣ್ವ — ಧರ್ಮೈಕಪರಾಯಣನೂ ಸಕಲಲೋಕದ ಅಭ್ಯುದಯನಿಃಶ್ರೇಯಸಹೇತುವೂ ಎನಿಸಿದ ಮಹಾರಾಜನಿಗೆ ನಿರ್ವಿಘ್ನವಾದ ತಪಸ್ಸಿದ್ಧಿಗೆ ಕ್ಷೇತ್ರವೂ ಪೂರ್ವರಾಜರ್ಷಿವಂಶಾಧ್ಯಾಸಿತವೂ ಎನಿಸಿರುವ ನೈಮಿಷಾರಣ್ಯದಲ್ಲಿ ಪೂಜ್ಯಬುದ್ಧಿಯಿರುವುದು ಯುಕ್ತವೇ ಸರಿ.

॥ ಮತ್ತೇಭವಿಕ್ರೀಡಿತ ॥

ಪಿರಿದಿರ್ದೊಂದು ಧನುಸ್ಸಿನಿಂದೆ ಗೆಲುತುಂ ನಾಕಂಬರಂ ಧಾತ್ರಿಯಂ
ಬಿಡದಾಕಲ್ಪಿಸಿ ಯಾಗಪುಣ್ಯಫಲದಿಂ ನಾಕಕ್ಕೆ ಸನ್ಮಾರ್ಗಮಂ ।
ಕಡುವಾತ್ಸಲ್ಯದೆ ಪುತ್ರರಲ್ಲಿ ಧರಣೀಸಾಮ್ರಾಜ್ಯಮಂ ಬಿಟ್ಟು ಕಾ-
ಪಿಡೆ ಕಲ್ಯಾಣಮನಿಲ್ಲಿವಂದು ತಪದೊಳ್ಸಂದಪ್ಪುರಿಕ್ಷ್ವಾಕುಗಳ್ ॥ ೫ ॥

ರಾಮ — (ತಪೋವನಕ್ಕಾಗಿ ನಮಸ್ಕರಿಸುವನು)

ಕಣ್ವ — ಈ ನೈಮಿಷಾರಣ್ಯದ ಅನನ್ಯಸಾಮಾನ್ಯವಾದ ಮಾಹಾತ್ಮ್ಯವನ್ನು ನೋಡು —

॥ ಉತ್ಪಲಮಾಲೆ ॥

ಇಲ್ಲಿ ನಿರೀಕ್ಷಿಸಲ್ ಹರಶಿರಸ್ಥಸುಧಾಕರರೋಚಿಯೊಂದಿಗಿ
ರ್ದಲ್ಲಿ ಕದುಷ್ಣಮಾಗಿರುತೆ ಕಂದಿಸಲೊಲ್ಲದೆ ಪಲ್ಲವಂಗಳಂ ।
ಸಲ್ಲಲಿತಾಂಬುಜಾಕರಮನಾರಿಸದಿರ್ದು ಕೃತಾರ್ಥಮಪ್ಪುದಿಂ
ತೆಲ್ಲರ ದೃಷ್ಟಿಗಳ್ಗೆ ಬೆಳಕೀವುದರಿಂದೆ ನಿದಾಘದಾತಪಂ ॥ ೬ ॥

ಅಷ್ಟುಮಾತ್ರವಲ್ಲದೆ;

॥ ಉತ್ಪಲಮಾಲೆ ॥

ಇಲ್ಲಿ ಮಹಾಧ್ವರಂಗಳೆ ಸದಾ ನಡೆಯಲ್ಕೆಳಿತಂದು ದೇವತಾ
ವಲ್ಲಭನಲ್ಲಿ ನಂದನದ ಚಂದನಶಾಖಿಗಳಂ ಮನಕ್ಕೆ ತಾ- ।
ನೊಲ್ಲದೆ ತನ್ನ ವಾಹನಮನಾ ಗಜಮಂ ನೆರೆ ಬಂಧಿಸಲ್ಕೆ ನೋ
ಡಿಲ್ಲಿಯೆ ಸಾಕ್ಷಿಯಂತೆ ನಿವುರಿದ್ದ ಮಹೀರುಹವಾರಮೊಪ್ಪುಗುಂ ॥ ೭ ॥

ರಾಮ—(ನೋಡಿ) ನಿರಂತರವೂ ಮಹಾಯಜ್ಞಗಳು ನಡೆಯುತ್ತಿರುವ ಈ ಧರ್ಮಾರಣ್ಯದ ಮೂಲಕ ಭಗವಂತನಾದ ಪುರಂದರನು ನಂದನವನದ ಜ್ಞಾಪಕವನ್ನು ಕೂಡ ಮರೆತಿರುವನು—

ಕಂದ ॥ ಸುರಪಾಹ್ವಾನದ ಮಂತ್ರ
ಸ್ವರಮಂ ಕೇಳ್ದಕ್ಕೆ ಶಚಿಯುಗಳ್ಕೆಗೆ ಶೋಕಾ ।
ತುರಿಯಾಗಿ ಪುಷ್ಪಮಾಲೆಯ
ನಿರಮಳಿದೊಂದಾದ ಜಡೆಯನಿಕ್ಕುವಳೆಂದುಂ ॥ ೮ ॥

ಕಣ್ವ—ಮತ್ತಿದನ್ನು ನೀನು ನೋಡಿರುವೆಯಾ?

॥ ಮತ್ತೇಭವಿಕ್ರೀಡಿತ ॥

ಇದೊ ಸಾಮಧ್ವನಿಯೇಳಲಿತ್ತ ಬನದೊಳ್ ಕೇಳಕ್ಕೆ ಬಂದಳ್ಕರಿಂ
ಮುದಮಾನುತ್ತಲೆ ತಾಳಪತ್ರಮೆನೆ ತೋರುತ್ತಿರ್ಪ ಕರ್ಣಂಗಳಿಂ ।
ಪದುಳಂ ಸ್ತಬ್ಧತೆಯಾಂತಿರಲ್ ಮಧುಕರಂಗಳ್ಬಾಡೆ ಕರ್ಣಾಂತದೊ
ಳ್ಮುದದಿಂ ದಾನಮನಿತ್ತು ಮತ್ತಗಜಸಂಘಾತಂ ಕರಂ ಶೋಭಿಕುಂ ॥ ೯ ॥

ರಾಮ—(ನಕ್ಕು) ಇಲ್ಲಿ ಆಶ್ಚರ್ಯವೇನು?

॥ ವಂಶಸ್ಥ ॥

ಕರಂ ಪವಿತ್ರಂ ವರಪುಣ್ಯದಾಯಕಂ
ಸುರಮ್ಯಮೀ ತಾಪಸಸಾಮಗಾನಮಿಂ ।
ತಿರಲ್ಪ್ರವಾಸಿವ್ರಜಚಿತ್ತರಂಜಕಂ
ನಿರಂತರಂ ರಂಜಿಸದೇನಿಭಂಗಳಂ ॥ ೧೦ ॥

ಕಣ್ವ—(ಸ್ವಗತಂ) ಆಹಾ! ರಾಮನಿಗೆ ಪ್ರವಾಸದಲ್ಲಿ ಬಹುವೈರಾಗ್ಯವುಂಟಾಗಿರುವುದು. ತಿರ್ಯಗ್ಜಂತುಗಳಿಗಿಂತಲೂ ಪ್ರವಾಸಿಗಳು ಶೂನ್ಯಹೃದಯರೆಂದು ತಿಳಿದುಕೊಳ್ಳುವನಲ್ಲ! (ಪ್ರಕಾಶಂ) ರಾಮನೇ ಇಲ್ಲಿ ನೋಡು—

॥ ಪಂಚಚಾಮರ ॥

ಮುನಿಪ್ರಭಾವದಿಂದಲೇ ವಸಂತಮಲ್ಲದಿರ್ದೊಡಂ
ವನಾಂತದಲ್ಲರಲ್ದ ಚೂತಮಂ ಬಿಡುತ್ತಲಿವ್ರಜಂ ।
ಅನಿತ್ತುಮೆಳ್ದ ಹೋಮಧೂಮದಿಂದೆ ಬೆರ್ಚುತೋಡಿ ಜೀ
ವನಾಶಯಂ ಸರೋಜಗರ್ಭಮಂ ಪುಗಲ್ಮನೋಜ್ಞಮೈ ॥ ೧೧ ॥

ರಾಮ—ಇದೇನು ? ನಿರಂತರವಾದ ಆಹುತಿಯಿಂದ ಹೆಚ್ಚುತ್ತಿರುವ ಧೂಮರಾಶಿಯು ತುಂಬಿಗಳನ್ನು ಚದರಿಸಿದಂತೆ ನಮ್ಮನ್ನೂ ಬಾಧಿಸ ತೊಡಗಿತಲ್ಲ!

ಕಣ್ವ—ಓಹೋ! ನಿಜವಾಗಿಯೂ ನಿನ್ನ ಕಣ್ಣುಗಳು ಹೊಗೆಯಿಂದ ಬಾಧೆಹೊಂದಿದುವು.

ರಾಮ— ॥ ಕಂದ ॥

ಧರಣಿಜೆಯಗಲ್ಕೆಯೊದವಲ್
ಮರುಕದಿನನವರತಬಾಷ್ಪಮುಂ ಸುರಿಸುತ್ತುಂ ।
ಪಿರಿದುಂ ಬಳಲಿರ್ಪೊಡೆಯುಂ
ಕೊರಗಿಪುದೆನ್ನೀಕ್ಷಣಂಗಳಂ ಪೊಗೆ ಮಿಗೆಯುಂ ॥ ೧೨ ॥

ಕಣ್ವ—ಹಾಗಾದರೆ ಇಲ್ಲೀ ಮುಂದೆ ತೋರುವ ಆಶ್ರಮದ ಕಮಲಾಕರಕ್ಕೆ ಹೋಗಿ ತಂಪಾಗಿರುವ ನೀರಿನಿಂದ ಮುಖತೊಳೆದು ನಯನಬಾಧೆಯು ಕಡಿಮೆಯಾಗುವ ತನಕ ವಿಶ್ರಮಿಸಿಕೊಳ್ಳುತ್ತ ಸ್ವಲ್ಪ ಹೊತ್ತು ಅಲ್ಲೀ ಕುಳಿತುಕೋ! ನಾನಾದರೂ ಕುಲಪತಿಯ ಅಗ್ನಿಹೋತ್ರದ ವೇಳೆಯನ್ನು ಸಮೀಪದಲ್ಲಿದ್ದುಕೊಂಡೇ ಸಂಭಾವಿಸುವೆನು. (ಎಂದು ಹೋಗುವನು)

ರಾಮ—(ಮುಂದಕ್ಕೆ ಹೋಗಿ) ಇದೇ ಸರೋವರವು! ಇಲ್ಲಿ ಇಳಿದುಕೊಳ್ಳುವೆನು. (ಎಂದು ಇಳಿದು) ಆಹಾ! ಈ ಕಮಲಾಕರದ ನೀರು ಎಷ್ಟು ನಿರ್ಮಲವಾಗಿರುವುದು. (ನೀರಲ್ಲಿ ನೆರಳನ್ನು ಕಂಡು ಸಂಭ್ರಮದಿಂದ) ಇದೇನು? ಸೀತೆಯೂ ಇಲ್ಲಿರುವಳೆ ? (ಎಂದು ಸಂತೋಷಾಶ್ಚರ್ಯಗಳನ್ನು ಪ್ರಕಟಿಸುವನು)

ಸೀತೆ—(ನೋಡಿ) ಆಹಾ! ಇದೆಂತಹ ಪ್ರಮಾದವು! ಹಂಸಮಿಥುನಾವಲೋಕನದಲ್ಲೀ ನಿರತಳಾಗಿದ್ದ ನಾನು ಅಕಸ್ಮಾತ್ತಾಗಿ ಬಂದ ಆರ್ಯಪುತ್ರನನ್ನು ನೋಡಲೇ ಇಲ್ಲ. ಈಗ ಮೆಲ್ಲಗೆ ಹಿಂದಕ್ಕೆ ಸರಿಯುವೆನು. (ಎಂದು ಹಾಗೆಯೇ ಮಾಡುವಳು)

ರಾಮ—ಏನು? ಸೀತೆಯು ನನ್ನನ್ನು ಗೌರವಿಸದೇನೇ ಹೊರಟು ಹೋದಳೆ ?

ಕಂದ ॥ ಬೆಳರ್ವಣ್ಣದ ಮೊಗದಿಂದಂ
ಲುಳಿತಾಳಕೆ ವಿಪ್ರಯೋಗದುಃಖಮನನಿತಂ ।
ತಿಳಿಸುತೆ ಕಾಲಾಂತರದಿಂ
ಬಳಿವಂದುಂ ತೊರೆದು ಪೋಪಳೆಲ್ಲಿಗೊ ಮತ್ತಂ ॥ ೧೩ ॥

ಆದುದರಿಂದ ಇವಳನ್ನು ಹಿಡಿದುಕೊಳ್ಳುವೆನು. (ಹಾಗೆಯೇ ತೋಳು ಗಳನ್ನು ಚಾಚಿ) ಇವಳು ವೈದೇಹಿಯಲ್ಲ. ಆದರೆ—

ಕಂದ ॥ ಸರಸಿಯ ತೀರದೊಳೆತ್ತಲೊ
ಸರಿಯುತ್ತಿರೆ ವಾರಿಯಲ್ಲಿ ಪಡಿನೆಳಲಂ ಕಂ-
ಡಿರದರಿಯದೆ ಜಲಜಾಂಬಕೆ
ಧರಣಿಜೆಗೆತ್ತಿಲ್ಲಿ ಸಂಭ್ರಮಕ್ಕೊಳಗಾದೆಂ ॥ ೧೪ ॥

ಆದುದರಿಂದ ಈ ಪ್ರತಿಬಿಂಬದ ಮೂಲಪ್ರಕೃತಿಯನ್ನು ಹುಡುಕು ವೆನು. (ಎಂದು ಹುಡುಕಿ ನೋಡುವಂತೆ ಅಭಿನಯಿಸಿ) ಈ ಸರೋವರದ ದಂಡೆ ಯಲ್ಲಿ ಜನರ ಸುಳಿವೇ ಇಲ್ಲ. ಬಿಂಬವಿಲ್ಲದೆ ಪ್ರತಿಬಿಂಬವು ಸಂಭವಿಸ ಲಾರದು; ಮತ್ತೆ ಇದೇನಾಗಿರಬಹುದು?

ಸೀತೆ—ಆರ್ಯಪುತ್ರನು ಪ್ರತಿಬಿಂಬವನ್ನು ನೋಡುತ್ತಿರುವನು. ನನ್ನ ನ್ನು ಮಾತ್ರ ಕಾಣದಿರುವನು. ಇದಕ್ಕೆ ಕಾರಣವೇನಿರಬಹುದು? (ಯೋಚಿಸಿ) ಆಹಾ! ತಿಳಿಯಿತು. ಈ ಜಲಾಶಯದ ತೀರದಲ್ಲಿರುವ ಸ್ತ್ರೀಯರು ಪುರು ಷರ ದೃಷ್ಟಿಗೆ ಗೋಚರಿಸಲಾರರೆಂಬುದು ತಪೋವನವಾಸಿಸಿಯರ ಸಲುವಾಗಿ ಮುನೀಶ್ವರನು ತೋರಿದ ಅನುಗ್ರಹವು. ಪ್ರತಿಬಿಂಬವು ಕೂಡ ಕಾಣಿಸ ದಂತೆ ಅನುಗ್ರಹಿಸಿದ್ದರೆ ನನಗೆ ಬಹಳ ಉಪಕಾರವಾಗುತ್ತಿತ್ತು. ಈಗ ನೀರಲ್ಲಿ ನನ್ನ ಪ್ರತಿಬಿಂಬವು ಕಾಣಿಸದಂತೆ ಸ್ವಲ್ಪ ಹಿಂದಕ್ಕೆ ಸರಿಯುವೆನು. (ಎಂದು ಹಾಗೆಯೇ ಮಾಡುವಳು)

ರಾಮ—ಸ್ವಚ್ಛವಾದ ನೀರಲ್ಲಿ ತೋರುವ ಸೀತೆಯ ಪ್ರತಿಬಿಂಬವನ್ನೇ ನೋಡುವೆನು. (ಹಾಗೆಯೇ ನೀರಲ್ಲಿ ನೋಡಿ) ಇದೇನು? ಅವಳೂ ಕಣ್ಮರೆ ಯಾದಳಲ್ಲ! (ಎಂದು ಮೈಮರೆಯುವನು)

ಸೀತೆ—ಆಹಾ! ಕಷ್ಟವೇ! ಆರ್ಯಪುತ್ರನು ಮೈಮರೆತನಲ್ಲ! ನಾಸೀ ಗಲೇ ಸಮೀಪಕ್ಕೆ ಹೋಗುವೆನು. (ಎಂದು ಸ್ವಲ್ಪ ಮುಂದೆ ಬರುವಳು) ಒಂದು ವೇಳೆ ಅವನು ನನ್ನನ್ನು ನೋಡಿದರೆ ಮರಳಿ ಸಿಟ್ಟುಗೊಳ್ಳುವನೋ ಏನೋ? ಹಾಗಾದರೆ ಮುನಿಜನರೆಲ್ಲರೂ ನನ್ನನ್ನು ಅವಿನೀತೆಯೆಂದು ಭಾವಿಸುವರು. ಆದುದರಿಂದ ನಾನು ಇಲ್ಲಿಂದ ಹೋಗಿಬಿಡುವೆನು. (ಎಂದು ಹಿಂದಿರುಗಿ) ಅಥವಾ ಇದು ಯುಕ್ತಾಯುಕ್ತವಿವೇಚನೆಗೆ ಸಮಯವಲ್ಲ. ಆರ್ಯಪುತ್ರನು ಕೋಪಿಸಿಕೊಳ್ಳಲಿ! ಮುನಿಜನರಾದರೂ ಅವಿನೀತೆಯೆಂದು ತಿಳಕೊಳ್ಳಲಿ!

ಇಂತಹ ವಿಷಮಸ್ಥಿತಿಯಲ್ಲಿರುವ ಆರ್ಯಪುತ್ರನನ್ನು ಬಿಟ್ಟುಹೋಗಲು ನನ್ನಿಂದಾಗಲಾರದು. (ಎಂದು ಮುಂದಕ್ಕೆ ಬಂದು) ಓಹೋ ಲೋಕಪಾಲಕರೇ, ನೀವು ಲಾಲಿಸಬೇಕು! ಆರ್ಯಪುತ್ರನು ನನ್ನನ್ನು ಪರಿತ್ಯಾಗಮಾಡಿರುವನು. ಈಗಲೂ ನಾನು ನೀತಿತಪ್ಪಿ ಆತನ ಶಾಸನವನ್ನು ಮೀರಲಾರೆನು. ಆದರೆ ಶೋಕವೇಗದ ಬಲಾತ್ಕಾರದಿಂದ ನಾನೇ ನನ್ನ ಅಧೀನದಲ್ಲಿ ಇಲ್ಲದಂತಾಗಿ ಇಂತಹ ಸಾಹಸವನ್ನು ನಡೆಯಿಸುತ್ತಿರುವೆನು. (ಎಂದು ಸಮೀಪಕ್ಕೆ ಹೋಗಿ ಚೆನ್ನಾಗಿ ನೋಡಿ) ಆಹಾ! ಕಷ್ಟವೇ! ಆರ್ಯಪುತ್ರನು ಚೇತನವನ್ನೇ ಪರಿತ್ಯಜಿಸಿದಂತಿರುವನಲ್ಲಾ! (ಎಂದು ಆಲಿಂಗಿಸುವಳು. ರಾಮನು ಮೆಲ್ಲಗೆ ಚೇತರಿಸಿಕೊಳ್ಳುವನು ಸೀತೆಯು ಹಿಂದೆ ಸರಿಯುವಳು)

ರಾಮ — ಇದೇನು ಆಕಸ್ಮಿಕವಾಗಿ ಪುಲಕಿತನಾಗಿರುವೆನು.

ಸೀತೆ — ಪರಿತ್ಯಕ್ತೆಯಾಗಿ ಇಂತಹ ಸಾಹಸವನ್ನು ಮಾಡಿದ ನನಗೆ ಬಹಳ ಹೆದರಿಕೆಯುಂಟಾಗುತ್ತದೆ.

ರಾಮ —(ವ್ಯಸನಪಡುತ್ತ)

ಕಂದ ॥ ಪೊಡವಿಜೆ ಧೃಢಮಾಲಿಂಗಿಸು

ಸೀತೆ — ನಿರಪರಾಧಿನಿಯಾಗಿರುವೆನು.

ಗೆಡೆಯಳೆ ನೀಂ ನಲ್ಮೆಯಿಂದೆ ದರ್ಶನಮೀಯೌ ।

ಸೀತೆ — ಸಿದ್ಧಶಾಸನವು ಮೇಲ್ಮೆಯನ್ನು ತೋರುತ್ತಿರುವುದು. ಈ ಮಂದಭಾಗಿನಿಯು ಮಾಡುವುದೇನು?

ರಾಮ — ಕಡುರಾಗಂದಳೆದೆನ್ನೊಳ್

ಬಿಡು ರೋಷಮಂ......।

ಸೀತೆ — ನಾನೂ ಆರ್ಯಪುತ್ರನೊಡನೆ ಹೀಗೆಯೇ ವಿಜ್ಞಾಪಿಸಿಕೊಳ್ಳುವೆನು.

ರಾಮ —............ಇಂತು ನಿನಗೆ ನಿಷ್ಕರುಣೆಯದೇಂ ॥ ೧೫ ॥

ಸೀತೆ — ಆರ್ಯಪುತ್ರನೇ, ಉಪಾಲಂಭವು ವಿಪರ್ಯಯವಾಗಿರುವುದಲ್ಲವೆ?

ರಾಮ — ಕಂದ ॥ ಬಿನ್ನಯಿಪೆಂ ಹೃದಯೇಶ್ವರಿ

ಸೀತೆ — ಅನಹಿತೆಯಾಗಿರುವೆನು! ಆಜ್ಞಾಪಿಸು!

ರಾಮ — ನಿನ್ನಂತಿರೆ ಶುದ್ಧಚರಿತೆಯಿಲ್ಲದುದರಿತುಂ ।

ಸೀತೆ—ಆಹಾ! ಜೀವಿಸಿರುವುದು ಸಾರ್ಥಕವು.

ರಾಮ— ಜನಪದದಿಂ ನಿರ್ವಾಸಿತೆ

ಸೀತೆ—ಆರ್ಯಪುತ್ರನು ಸಕಲಪರಿಜನರಿಗೂ ಪ್ರಭುವಾಗಿರುವನು.

ರಾಮ— ಯೆನತಪರಾಧಕ್ಕೆ ಮುನಿಯಲಾಗದು ನಲ್ಲೇ ॥ ೧೬ ॥

ಸೀತೆ—ನೀನು ಪ್ರಸನ್ನನಾಗಬೇಕು. ನಾನು ನಿತ್ಯಪ್ರಸನ್ನಳು.

ರಾಮ—ಕಂದ॥ ಇನಿಯಳೆ ಪಟಾಂತಶಯನದೊ
ಳೆನಸುಂ ಬಾಹೂಪಧಾನದಿಂದಂ ಕಡುಚೆ- ।
ಲ್ವಿನ ಪೌರ್ಣಮಿಯಂದು ನಿಶೀ-
ಥಿನಿಯಂ ನಿನ್ನೊಂದಿಗೆಂದು ಕಳೆವೆನೊ ಪೇಳಾ ॥೧೭॥

ಸೀತೆ—ಎಲೈ ಜನಾಪವಾದಭೀರುವೆ, ಈ ಜನವು ಸಮೀಪದಲ್ಲಿರಲು ಸಂತಪಿಸುವೆಯಾ?

ರಾಮ—ಹಾ ಪ್ರಿಯೆ, ಜನಕರಾಜಪುತ್ರಿ! ನನಗೆ ಪ್ರತ್ಯುತ್ತರವನ್ನು ಕೊಡು. (ಎಂದು ಮೂರ್ಛೆಹೊಂದುವನು)

ಸೀತೆ—ಇದೇನು! ಆರ್ಯಪುತ್ರನು ಮರಳಿ ಮೈಮರೆತನಲ್ಲ! ಸಮಾಧಾನಗೊಳಿಸುವೆನು. (ಎಂದು ಸೆರಗಿನಿಂದ ಬೀಸುವಳು)

ರಾಮ—(ಕೈನೀಡಿ ಸೆರಗನ್ನು ಹಿಡಿದುಕೊಳ್ಳುವನು) ಇದೇನು ಸೆರಗಿನಂತಿದೆ? ಯಾವ ಜನವಾಗಿರಬಹುದು? (ಎಂದು ಯೋಚಿಸಿ) ಅಥವಾ—

॥ ಗೋಮುತೀ ॥

ಧರಣಿಜೆಯಿವಳಲ್ಲದಿರ್ಪೊಡೀ ಪ್ರಭಾವಂ
ಪರಯುವತಿಯರೊಳ್ನಿರೀಕ್ಷಿಸಲ್ಕಭಾವಂ ।
ತರಣಿಯ ಕುಲದಲ್ಲಿ ಜನ್ಮವೆತ್ತಿದೆನ್ನಂ
ಪರವನಿತೆ ಸೆರಂಗಿನೆಂತು ಬೀಸುತಿರ್ಕುಂ ॥ ೧೮ ॥

ಆದುದರಿಂದ ಈಕೆಯನ್ನು ನೋಡುವೆನು (ಎಂದು ಕಣ್ಣುತೆರೆದು) ಕಂಬನಿ ತುಂಬಿರುವುದರಿಂದ ಏನೊಂದೂ ಕಾಣಿಸುವುದಿಲ್ಲ. ಆದ್ದರಿಂದ ಇದನ್ನು ಸೆಳೆದು ಕಣ್ಣುಗಳನ್ನು ಒರಸಿಕೊಳ್ಳುವೆನು. (ಎಂದು ಹಾಗೆಯೇ ಮಾಡುತ್ತ ಅದನ್ನು ಸೆಳೆಕೊಳ್ಳುವನು)

ಸೀತೆ—(ಸೆರಗನ್ನು ಸಡಿಲುಬಿಟ್ಟು) ಆರ್ಯಪುತ್ರನೇ, ನೀನು ಪ್ರಣಯ ಕುಪಿತನಂತೆ ಪರಕೀಯವಾದ ಉತ್ತರಿಗೆಯಿಂದ ಕಂಬನಿಯನ್ನು ಒರಸಿಕೊಳ್ಳ ಬಾರದು.

ರಾಮ— (ಉತ್ತರಿಗೆಯು ಜಾರಿಬಿದ್ದುದನ್ನು ನೋಡಿ) ಇದೇನು! ಉತ್ತರಿಗೆ ಮಾತ್ರವೇ ಕಾಣುತ್ತಿರುವುದು. ಅದನ್ನು ಧರಿಸಿಕೊಂಡ ಜನವಿನ್ನೂ ಕಾಣಿಸದು!

ಕಂದ ॥ ಆಗಸದೆ ಸೋರ್ದ ಜೊನ್ನಮೊ
ನಾಗನ ತನುವಿಂದೆ ಕಳಚಿಬಿದ್ದಾ ಪೆರೆಯೋ।
ಪೋಗುವ ನಾರಿಯ ಸೆರಗೆನೆ
ತೂಗುಮನಂ ಸೆಳೆದೆನಿದರ ಮರ್ಮವನರಿಯೆಂ ॥ ೧೯ ॥

(ಎಂದು ಮತ್ತೂ ದಿಟ್ಟಿಸಿ ನೋಡಿ) ನಿಷ್ಕಾರಣವಾಗಿ ಅಸಮೀಕ್ಷ್ಯಕಾರಿ ಯೆಂದು ನನ್ನನ್ನು ನಾನೇಕೆ ಭಾವಿಸಿಕೊಳ್ಳಬೇಕು? ಇದು ನಿಜವಾಗಿಯೂ ಸೀತಾಂಗನೆಗೆ ಚಿತ್ರಕೂಟವನದೇವತೆಯಾದ ಮಾಯಾವತಿಯಿತ್ತು ಸಂಭಾವಿಸಿದುದು.

॥ ಉತ್ಪಲಮಾಲೆ ॥

ಆವುದು ಜೂದಿನಲ್ಲಿ ಪಣಮಾ ರತಿಕೇಳಿಗೆ ಕಂಠಪಾಶಮಿ
ನ್ನಾವುದು ಕಾಮನಾಟದ ಪರಿಶ್ರಮಹಾರಕತಾಲವೃಂತಕಂ।
ಆವುದು ಯಾಮಿನೀಕಲಹಕಾಲದೊಳುತ್ತಮಶಯ್ಯೆಯಾದುದಿಂ
ತಾವುದದೇ ಮುಸುಂಕು ದೊರಕಿತ್ತೆನಗಿಲ್ಲಿಯೆ ದೈವಯೋಗದಿಂ ॥ ೨೦ ॥

ಸೀತೆ— ವಿಧಿವಶದಿಂದ ಆರ್ಯಪುತ್ರನು ಗುರುತಿಸಿದನು.

ರಾಮ— ನನ್ನ ಪ್ರೇಯಸಿಗೆ ಅತ್ಯಂತ ಪ್ರಿಯವೆನಿಸಿರುವ ಈ ಸಂವ್ಯಾನವನ್ನು ಹೇಗೆತಾನೇ ಸಂಭಾವಿಸಲಿ? (ಯೋಚಿಸಿ) ಆಗಲಿ! ಇದಕ್ಕೆ ಇದೇ ಅನನ್ಯಸಾಧಾರಣವಾದ ಸನ್ಮಾನವಿಶೇಷವು. (ಎಂದು ಹೊದೆದುಕೊಂಡು ಸುತ್ತಲೂ ನೋಡಿ) ಹೀಗೆ ಎರಡು ಉತ್ತರಿಗೆಗಳನ್ನು ಧರಿಸಿಕೊಂಡರೆ ಮುನಿಜನರು ನನ್ನನ್ನು ಬೇರೇನಾದರೂ ಯೋಚಿಸುವರೋ ತಿಳಿಯೆನು. ಆದುದರಿಂದ ನನ್ನ ಉತ್ತರಿಗೆಯನ್ನು ತೊರೆಯುವೆನು. (ಎಂದು ಎಸೆಯುವನು)

ಸೀತೆ—(ಅದನ್ನು ತೆಗೆದುಕೊಂಡು ಸಂತೋಷದಿಂದ) ನಾನು ಇಷ್ಟುಕಾಲ ಪ್ರಾಣಧಾರಣೆಮಾಡಿಕೊಂಡಿದ್ದುದಕ್ಕೆ ಒಳ್ಳೆಯ ಫಲವೇ ದೊರೆಯಿತು. (ಎಂದು ಆಘ್ರಾಣಿಸಿ) ಅದೃಷ್ಟವಶದಿಂದ ಆರ್ಯಪುತ್ರನ ಉತ್ತರೀಯಕ್ಕೆ ಗಮಗಮಿಸುವ ವಿಲೇಪನವು ಲಿಪ್ತವಾಗಿಲ್ಲ. ರಘುವಂಶೋತ್ಪನ್ನರು ಸತ್ಯಸಂಧರೆಂಬುದರಲ್ಲಿ ಸ್ವಲ್ಪವಾದರೂ ಸಂಶಯವಿಲ್ಲ. (ಎಂದು ಹೇಳುತ್ತ ಉತ್ತರಿಗೆ

ಯನ್ನು ಹೊದ್ದುಕೊಂಡು) ಆಹಾ! ಪ್ರಿಯಜನಸಂಸರ್ಗದಿಂದ ಸುಖಸ್ಪರ್ಶವುಳ್ಳ ಈ ಸಂವ್ಯಾನವನ್ನು ಧರಿಸಿಕೊಂಡು ಆರ್ಯಪುತ್ರನ ವಕ್ಷಃಸ್ಥಳದ ಮೇಲೆ ಬಳಲಿದಂತೆ ನನ್ನ ದೇಹವು ದಟ್ಟವಾದ ರೋಮಾಂಚದಿಂದ ತುಂಬಿರುವುದು.

ರಾಮ—(ಆಶ್ಚರ್ಯದಿಂದ) ನಾನು ಎಸೆದು ಬಿಟ್ಟುದನ್ನು ನೆಲದ ಮೇಲೆ ಬೀಳದಂತೆಯೇ ಯಾರೋ ಅಪಹರಿಸಿಕೊಂಡರು. ಆದುದರಿಂದ ನನ್ನ ಮನೋರಥವು ಇಷ್ಟರಲ್ಲಿಯೇ ಫಲಿಸುವುದೆಂದು ತಿಳಿಯುವೆನು. (ಎಂದು ಚಿಂತಿಸುತ್ತ) ಉತ್ತರೀಯಾಪಹಾರವು ನೀರಲ್ಲಿ ಪ್ರತಿಬಿಂಬಿಸಿ ಕಾಣುತ್ತಿರುವುದು. ಸೀತೆಯು ಮಾತ್ರ ಕಾಣಿಸುವುದಿಲ್ಲ. ಇದೇನದ್ಭುತವೋ? ಆಗಲಿ; ಸಿದ್ಧಾಶ್ರಮದಲ್ಲಿ ವಾಸಿಸುವ ಜನರಿಂದ ಈಕೆಗೆ ಇಂತಹ ಮಹಿಮೆಯುಂಟಾಗಿರಬಹುದು. ಆದುದರಿಂದ ಇವಳನ್ನು ಪ್ರತ್ಯಕ್ಷವಾಗಿ ನೋಡಲಿರುವ ಉಪಾಯವೇನು? ಎಲೌ ವೈದೇಹಿ, ನೀನು ಯಾವುದೊಂದು ಪೂರ್ವವೃತ್ತಾಂತವನ್ನಾದರೂ ಸ್ಮರಿಸಿಕೊಳ್ಳುವುದಿಲ್ಲವೊ? ದರ್ಶನಮಾತ್ರದಿಂದಲಾದರೂ ನನ್ನನ್ನು ಹೀಗೆ ಗೌರವಿಸದಿರುವೆಯಲ್ಲ!

ಸೀತೆ— ಈಗ ಸ್ಮರಿಸಿಕೊಳ್ಳಬೇಕಾದುದು ಯಾವ ಪೂರ್ವವೃತ್ತಾಂತವು?

ರಾಮ— ॥ ಮತ್ತಕೋಕಿಲ ॥

ಸುತನು ಚಿತ್ರಗಿರಿಗೆಯ್ದಿ ಪೂಗಳಂ
ಜತನದಿಂ ತಿರಿಯುತಿರ್ದ ಕಾಲದೊಳ್ ।
ಅತನುಭಾವಪರನಂದು ಬಂದು ಭೂ-
ಸುತೆ ಸೆರಂಗೆಳೆಯೆ ಚೆಲ್ಲಿತಾ ಸುಮಂ ॥ ೨೧ ॥

ಪ್ರೇಯಸಿ, ಈ ವೃತ್ತಾಂತವು ನೆನಪಾದುದೆ?

ಸೀತೆ—(ನಗುತ್ತ) ಸಾಹಸಿಗ, ಅದಕ್ಕಾಗಿಯೇ ದೂರದಲ್ಲಿರುವೆನು.

ರಾಮ— ಯಾವ ಪ್ರತ್ಯುತ್ತರವನ್ನೂ ಕೊಡದಿರಲು ಕಾರಣವೇನು?

ಸೀತೆ— ಸಂಜೆಯಾಗುತ್ತ ಬಂತು. ಇಂತಹ ಅವಸ್ಥೆಯಲ್ಲಿರುವ ಆರ್ಯಪುತ್ರನನ್ನು ದೇವತಾದ್ವಿತೀಯನನ್ನಾಗಿ ಮಾಡಿ ತೆರಳುವುದು ತರವಲ್ಲ. ಆದರೆ ನಾನೇನು ಮಾಡಲಿ? (ಎಂದು ಸುತ್ತಲೂ ನೋಡಿ) ದೈವಯೋಗದಿಂದ ಆರ್ಯಪುತ್ರನ ಪ್ರಿಯಮಿತ್ರನಾದ ಕೌಶಿಕನು ಏನೋ ಹುಡುಕುತ್ತಿರುವಂತೆ ಅತ್ತಿತ್ತ ನೋಡುತ್ತ ಇತ್ತಲೇ ಬರುತ್ತಿರುವನು. ಆದುದರಿಂದ ನಾನು ಹೋಗುವೆನು. (ಎಂದು ಸರಿಯುವಳು)

(ಬಳಿಕ ಏನೋ ಹುಡುಕುತ್ತಿರುವ ಹಾಗೆ ವಿದೂಷಕನು ಪ್ರವೇಶಿಸುವನು)

ವಿದೂಷಕ—ಪೂಜ್ಯನಾದ ಅರಸನು ಈಗ ಎಲ್ಲಿರಬಹುದು? (ಅತ್ತಿತ್ತ ಸುತ್ತಿ ನೋಡಿ) ಓಹೋ! ಪ್ರಿಯಮಿತ್ರನು ಅತ್ಯಂತಮನೋಹರವಾದ ಆಕೃತಿಯಿಂದ ಒಪ್ಪುತ್ತ ಚಿಂತಾಕ್ರಾಂತನಂತೆ ಕಮಲಾಕರದ ತೀರವನ್ನು ಅಲಂಕರಿಸುತ್ತಿರುವನು. ಆದುದರಿಂದ ನಾನೀಗಲೇ ಅವನ ಸಮೀಪಕ್ಕೆ ಹೋಗುವೆನು (ಎಂದು ಬಳಿಸೇರಿ) ಪೂಜ್ಯನಿಗೆ ಮಂಗಳವಾಗಲಿ!

ರಾಮ---(ನೋಡಿ) ದೈವಯೋಗದಿಂದ ಪ್ರಿಯಮಿತ್ರನಾದ ಕೌಶಿಕನು ಬಂದನು. ವಯಸ್ಯ, ಈ ವರೆಗೆ ನೀನೆಲ್ಲಿದ್ದೆ?

ವಿದೂ—ಸೂರ್ಯೋದಯಕಾಲದಿಂದಲೂ ನಿನ್ನನ್ನು ಹುಡುಕುವುದರಲ್ಲೇ ಇಂದಿನ ಹಗಲೆಲ್ಲಾ ಕಳೆದು ಹೋಯಿತು.

ರಾಮ—ಹಾಗೆ ಪ್ರಯಾಸದಿಂದ ನನ್ನನ್ನು ಹುಡುಕಲು ಕಾರಣವೇನು?

ವಿದೂ—ಇಂದು ಮುಂಜಾನೆ ಮಾಧವೀಮಂಟಪದಲ್ಲಿ ಮರೆಯಾಗಿ ಕುಳಿತುಕೊಂಡು ವಿಶ್ವಾಸದಿಂದ ಮಾತುಕತೆಗಳನ್ನು ನಡೆಯಿಸುತ್ತಿದ್ದ ಮುನಿಕನ್ಯೆಯರ ಮತ್ತು ಅಪ್ಸರಸ್ತ್ರೀಯರ ಮುಖದಿಂದ ತಪೋವನದ ರಹಸ್ಯವೊಂದನ್ನು ಕೇಳಿದೆನು. ಅದು ನಿನಗೂ ಅತ್ಯಂತ ಪ್ರಿಯಕರವಾದುದು. ಹೊಟ್ಟೆಯೊಳಗಿರುವ ಮೂಢಗರ್ಭದಂತೆ ಅದು ನನ್ನನ್ನು ಬಹಳವಾಗಿ ಬಾಧಿಸುತ್ತಿರುವುದು.

ರಾಮ—ಅದೆಂತಹ ತಪೋವನರಹಸ್ಯವೊ?

ವಿದೂ—ಅಯ್ಯಾ, ನೀನು ಕೇಳಿಲ್ಲವೆ? ಮಾನ್ಯೆಯಾದ ಆಕೆಯು......

ರಾಮ—(ಕಿವಿಗಳನ್ನು ಮುಚ್ಚಿಕೊಂಡು) ಆ ರಹಸ್ಯವು ಸ್ತ್ರೀವಿಷಯಕವಾದುದೊ? ಸಾಕು! ಸಾಕು! ಅದನ್ನು ಕೇಳುವುದೇಕೆ?

ವಿದೂ—ಹೆದರಬೇಡ! ನಾನು ರಾಮನ ಗೆಳೆಯನಲ್ಲವೆ? ಸುಪ್ರಸಿದ್ಧಳಾದ ಸ್ವರ್ಗಲೋಕದ ವೇಶ್ಯೆಯನ್ನು ಕೇಳಿ ಬಲ್ಲೆಯಷ್ಟೆ?

ರಾಮ—(ಸ್ವಗತಂ) ಇದು ದೇವಲೋಕದ ವೇಶ್ಯೆಯನ್ನು ಸಂಬಂಧಿಸಿದ ಕಥೆಯು? ಅದನ್ನು ಕೇಳಿದುದರಿಂದ ದೋಷವಿಲ್ಲ. (ಪ್ರಕಾಶಂ) ಅವಳಾವಳು! ಆ ಪುರಾಣಸ್ವರ್ಗದಾಸಿಯು? ಊರ್ವಶಿಯೊ? ತಿಲೋತ್ತಮೆಯೊ?

ವಿದೂ—ತಿಲೋತ್ತಮೆಯೋ ಶಿಲೋತ್ತಮೆಯೋ ನಾನರಿಯೆನು. ಆಕೆಯು ಚಿರಕಾಲವಿಯುಕ್ತಳೆನಿಸಿದ ವಿದೇಹರಾಜನಂದಿನಿಯ ನಡೆವಳಿ

ಯನ್ನು ಅನುಕರಿಸುವ ಮೂಲಕ ಪ್ರಿಯವಯಸ್ಯನನ್ನು ಪರಿಹಾಸಮಾಡ ಬೇಕೆಂದಿರುವಳು.

ರಾಮು—(ಸ್ವಗತಂ) ಆಹಾ ಕಷ್ಟವೇ! ಕೌಶಿಕನು ಹೇಳಿದುದು ಸರಿಯಾಗಿರುವುದು. ಅಲ್ಲವಾದರೆ ಪ್ರಿಯೆಯ ಹತ್ತಿರವಿದ್ದ ಗುರುತು ಕಾಣಿಸುತ್ತಿದ್ದರೂ ಆಕೆಯು ಕಾಣಿಸದಿರುವುದು ಮನುಷ್ಯಸ್ತ್ರೀಯರಲ್ಲಿ ಸಂಭಾವ್ಯವಲ್ಲ. ಕಾಮರೂಪಿಣಿಯಾದ ತಿಲೋತ್ತಮೆಯು ನನ್ನನ್ನು ಸರ್ವಥಾ ವಂಚಿಸಿದಳು.

ಕಂದ ॥ ನೀರಳ್ಕೆಯೆಂಬ ಮೋಹದೆ
ಸರಸಿಯೊಳಿಳಿದೀಂಟಲೆಂದು ಕೈಚಾಚುತ್ತುಂ ।
ಬರಿದೇ ಬೊಗಸೆಯನೊಡ್ಡು
ತ್ತಿರರೇ ಬಳಲ್ದೆನರಣ್ಯಮೃಗತೃಷ್ಣಿಕೆವೋಲ್ ॥ ೨೨ ॥

(ಉತ್ತರಿಗೆಯನ್ನು ನೋಡಿ) ಆ ಮಾಯಾವಿನಿಯು ಈ ಉತ್ತರೀಯವನ್ನೂ ನಿರ್ಮಿಸಿದಳೇನು? ಆಹಾ! ಪರವಂಚನೆಯಲ್ಲಿ ಎಂತಹ ನೈಪುಣ್ಯವು?

ವಿದೂ—ವಯಸ್ಯ, ಇದೇನು? ಆಶ್ಚರ್ಯದಿಂದ ಕೂಡಿರುವಂತೆ ನಿನ್ನ ಮುಖವು ತೋರುತ್ತಿದೆ. ಅವಳಿಂದ ಮೋಸಹೋದೆಯಾ?

ರಾಮು—ವಂಚಿತನಾಗಿಯೇ ಇರುವೆನು.

ವಿದೂ—ನಾನು ಕೇಳಿದ ರಹಸ್ಯವು ತಪ್ಪಿ ಹೋಗುವುದುಂಟೆ?

(ತೆರೆಯಲ್ಲಿ)

॥ ಶಾರ್ದೂಲ ವಿಕ್ರೀಡಿತ ॥

ಭೂಪಂ ಸ್ವಪ್ರಭೆಯಿಂದೆ ತೀಕ್ಷ್ಣಕರನಾಗಿರ್ದೆಲ್ಲ ಲೋಕಂಗಳಂ
ಕಾಪಿಟ್ಟೆಲ್ಲರ ಮುನ್ನಮುನ್ನತನೆನಲ್ತಿಗ್ಮಾಂಶು ತಾನೊಪ್ಪುತುಂ ।
ತಾಪಂಬಿಟ್ಟು ವಯಸ್ಸಿನೊಂದು ಪರಿಣಾಮಕ್ಕಿಂತು ಪಕ್ಕಾಗಿ ತಾಂ
ಪೋಪಂ ಮೆಲ್ಲನೆ ಶಾಂತತೇಜನೆನಸುಂ ಸಾಯಾಹ್ನಮಂದಾಂಟುತುಂ॥೨೩॥

ರಾಮು—(ನೋಡಿ) ಭಗವಾನ್ ಭಾಸ್ಕರನು ಅಸ್ತಮಾನಹೊಂದುತ್ತಿರುವನು—

॥ ದ್ರುತವಿಲಂಬಿತ ॥

ಪ್ರಿಯವಿಯೋಗದಿನಂಗಳನೆಣ್ಣುವಾ
ಪ್ರಿಯೆಯರಂಗುಲಿಯೊಂದಿಗೆ ಭಾಸ್ಕರಂ ।
ಅಯನಸದಂತ್ಯವನೆಯ್ದುತಿರಲ್ಕುಕೇ-
ಶಯದ ನಾಂದೆಸಳುಂ ವಿಸಿವಿಾಲಿಕುಂ ॥ ೨೪ ॥

ಅಷ್ಟುಮಾತ್ರವಲ್ಲದೆ—

॥ ಶಾರ್ದೂಲ ವಿಕ್ರೀಡಿತ ॥

ಸೂತಂ ಪ್ರಗ್ರಹದಿಂ ಬಲಾತ್ಕರಿಸುತುಂ ಪ್ರೋದ್ಯತ್ಕಶಾಘಾತದಿಂ
ಮತ್ತಂ ಪ್ರೇರಿಸೆ ಭಾಸ್ಕರಾಶ್ವನಿವಹಂ ಮುಮ್ಮುಂದಕೆಯ್ದುತ್ತೆ ತಾ- ।
ಮೆತ್ತುತ್ತುಂ ಚರಣಂಗಳಂ ಖುರಪುಟಾಗ್ರಾಘಾತದಿಂದಸ್ತಮಾ
ನೋತ್ತುಂಗಾಚಲವಗ್ರಮಂ ಕಳೆದು ಪಾರಾವಾರದೊಳ್ ಗಾಹಿಕುಂ ॥೨೫॥

(ಎಂದೆಲ್ಲರೂ ಹೊರಟು ಹೋಗುವರು)

---

## ಪಂಚಮಾಂಕಂ

(ಬಳಿಕ ವಿದೂಷಕನು ಪ್ರವೇಶಿಸುವನು)

ವಿದೂಷಕ—(ತೆರೆಯ ಕಡೆ ನೋಡಿ) ತಪೋಧನರು ಬಂದು ಸೇರುವ ಸಮಯವು ಸಮೀಪಿಸುತ್ತಿದೆ. ಆದುದರಿಂದ ನೀನು ತ್ವರೆಮಾಡಬೇಕು.

(ಬಳಿಕ ರಾಮನು ಪ್ರವೇಶಿಸುವನು)

ರಾಮ — ಕಂದ ॥ ಸವನದ ವಿಧಿಯಂ ತೀರಿಸಿ
ಹವನಂಗೆಯ್ದರ್ಚಿಸುತ್ತೆ ಭಗವಾನಿನನಂ ।
ದಿವಸೋದಯದೊಳ್ತವಕದೆ
ತವಸಿಗಳಂ ಕುಂಬಿಡಲ್ಕೆ ಬಂದೆಂ ನಲವಿಂ ॥ ೧ ॥

ವಿದೂ—ಇದೇ ಆಸ್ಥಾನಮಂಟಪವು. ಪೂಜ್ಯನು ಪ್ರವೇಶಿಸಬೇಕು.

ರಾಮ—(ಚಿಂತೆಯೊಡನೆ ಪ್ರವೇಶಿಸಿ) ಆಹಾ! ನಿನ್ನೆಯ ದಿನದ ನಮ್ಮ ಸಮಾಚಾರವು ಎಷ್ಟು ಆಶ್ಚರ್ಯಕರವಾದುದು.

ಕಂದ ॥ ನಿರುಕಿಸಲಾಂ ಪಾಂಡುರಪೀ
ವರಗಂಡಯುಗಂ ಕೆದರ್ದ ಲಂಬಾಲಕಮುಂ- ।
ಬುರುಹೇಕ್ಷಣಮೊಪ್ಪುತಿರಲ್
ಧರಣಿಜೆಯಂ ಕಂಡೆನೈ ಸರೋವರಜಲದೊಳ್ ॥ ೨ ॥

ಅಥವಾ ಇದೆಲ್ಲವೂ ತಿಲೋತ್ತಮೆಯ ಪರಿಹಾಸವಾಗಿರಬಹುದೆಂದು ತೋರುವುದು.

॥ ಶಾರ್ದೂಲವಿಕ್ರೀಡಿತ ॥

ಎಂತೋ ಸ್ವರ್ಗದ ದಾಸಿಯುಂ ಗ್ರಥನದೊಳ್ಕೌಶಲ್ಯಮಂ ತಾಳ್ದೊಡಂ
ಕಾಂತಾಪದ್ಧತಿಯಂತೆ ಸೈಕತದೆ ಪಾದನ್ಯಾಸಮಂ ಕಲ್ತೊಡಂ ।
ಅಂತುಂ ದೀರ್ಘಿಕೆಯಲ್ಲಿ ಸೀತೆಯೆನೆ ತಾನೇ ತೋರ್ದೊಡಂ ಚೋದ್ಯಮಿ-
ಲ್ಲೆಂತುಂ ಹಸ್ತಪಟಾಂತದಿಂ ರಘುಜನಂ ಬೀಸುತ್ತಲೀಂ ಸೋಂಕುಗುಂ
॥ ೩ ॥

(ಎಂದು ಚಿಂತೆಯನ್ನು ಅಭಿನಯಿಸುವನು)

ವಿದೂ—(ಸ್ವಗತಂ) ಇವನು ಚಿಂತಾಕ್ರಾಂತನಾಗಿರುವಂತೆ ತೋರುವನು. ಈಗ ಕುಳಿತುಕೊಂಡು ಇವನನ್ನು ಒತ್ತಾಯಪಡಿಸುವೆನು. (ಎಂದು ಕುಳಿತುಕೊಂಡು ಪ್ರಕಾಶಂ) ಗೆಳೆಯನೆ, ನೀನಿಲ್ಲಿ ನಿಂತುಕೊಂಡು ನವೀನವಾದ ಮೇಘದಂತೆ ಸ್ನಿಗ್ಧಶ್ಯಾಮಲವಾಗಿಯೂ, ಆಣಿಮುತ್ತುಗಳ ಮಾಲೆಯನ್ನು ಧರಿಸಿಕೊಂಡು ಬಹಳ ಎತ್ತರವಾಗಿರುವ ಇಂದ್ರನೀಲಮಣಿಸ್ತಂಭಗಳಲ್ಲಿ ಒಂದರಂತೆಯೂ ಕಂಗೊಳಿಸುತ್ತ ನನ್ನ ಅಂತರಂಗಕ್ಕೆ ವಿಭ್ರಮವನ್ನು ಉಂಟುಮಾಡುತ್ತಿರುವುದರಿಂದ ಲಕ್ಷ್ಮೀದೇವಿಗೆ ವಾಸಸ್ಥಾನವೆನಿಸಿ, ಸೇವೆಮಾಡುವುದಕ್ಕಾಗಿ ಬಂದು ಸಮಯವನ್ನು ಹಾರೈಸುತ್ತಿರುವ ಸಾಮಂತರಾಜರ ಮೃದುಮಧುರಯುಕ್ತವಾದ ಆಸ್ಥಾನಮಂಟಪವೆಂಬ ಪುಂಡರೀಕದ ಕರ್ಣಿಕೆಯಂತೆ ಕಂಗೊಳಿಸುವ ಈ ಸಿಂಹಾಸನದಲ್ಲಿ ಮಧುಸೂದನನ ನಾಭೀಕಮಲಕರ್ಣಿಕೆಯನ್ನೇರಿ ಕುಳಿತ ಭಗವಂತನಾದ ಪಿತಾಮಹನ ಮಹಿಮೆಯನ್ನು ಅಲ್ಲಗಳೆಯುವ ಹಾಗೆ ಕುಳಿತುಕೊ!

ರಾಮ—ನೀನು ಹೇಳಿದಂತೆಯೇ ಆಗಲಿ. (ಎಂದು ಕುಳಿತುಕೊಂಡು ಚಿಂತೆಯೊಡನೆ) ಇಂದು ನಾನು ಹೊಸ ರೀತಿಯ ಸುಖದುಃಖಗಳ ಸಲುವಾಗಿಯೇ ಜೀವವನ್ನು ತಳೆದಿರುವಂತಿದೆ. (ಎಂದು ಯೋಚಿಸಿ ಕೈಯನ್ನು ಎದೆಯ ಮೇಲೆ ಇರಿಸಿಕೊಂಡು)

ಕಂದ ॥ ಕ್ಷಿತಿಜೆಯನುಳಿದಾನಿರ್ದೆಂ
ಮತಿಗಿಲ್ಲದೆ ಸುಖದ ಕಷ್ಟದರಿವೆಂತಾನುಂ ।
ಪ್ರತಿಬಿಂಬಾದಿಗಳಂ ಕಂ-
ಡತಿಮಾತ್ರಂ ತೋರ್ಪುವಿಂದು ಸುಖದುಃಖಂಗಳ್ ॥ ೪ ॥

(ಎಂದು ಚಿಂತೆಯನ್ನು ನಟಿಸುವನು)

ವಿದೂ—(ರಾಮನ ಅವಸ್ಥೆಯನ್ನು ನೋಡಿ ಸ್ವಗತಂ) ಓಹೋ! ಇವನ ಅಭಿಪ್ರಾಯವನ್ನೀಗಲೇ ಕಂಡು ಹಿಡಿಯುವೆನು. (ಪ್ರಕಾಶಂ) ಅರಸನೆ, ನಿನ್ನ ಆಸನವಲ್ಲಿರುವ ಈ ಸಿಂಹಗಳು ಹೆಚ್ಚಾಗಿರುವ ಭಾರವನ್ನು ಹೊರಲಾರದೆ ಬಳಲಿರುವುವೋ ಎಂಬ ಹಾಗೆ ಮುಖದ ಮೂಲಕ ಹೊರಬಂದ ಮುತ್ತಿನ ಜಾಲರಿಗಳ ನೆವದಿಂದ ನೊರೆಯ ಧಾರೆಗಳನ್ನು ಕಾರುತ್ತಿರುವುವು. ಆದ ಕಾರಣ ಭುಜಗಳಿಂದ ಭೂಮಿಯನ್ನೂ ಅಂತರಂಗದಿಂದ ಭೂಜಾತೆಯನ್ನೂ ಹೊಂದಿದ ನೀನು ಗುರುತರನಾಗಿರುವೆ ಎಂದು ಊಹಿಸುವೆನು.

ರಾಮ—(ಸ್ವಗತಂ) ಕೌಶಿಕನು ಸೀತಾವಾರ್ತೆಯನ್ನು ಸರಿಯಾಗಿ ಕೇಳಿ ತಿಳಿಯಬೇಕೆಂಬ ಇಚ್ಛೆಯುಳ್ಳವನಂತೆ ತೋರುತ್ತಿರುವನು. ಬಾಲ್ಯದಿಂದಲೂ ನನಗೆ ಮಿತ್ರನಾಗಿರುವುದರಿಂದ ಇವನೊಡನೆ ನಿಜವಾದ ಸಂಗತಿಯನ್ನು ತಿಳಿಸುವೆನು. (ಪ್ರಕಾಶಂ) ವಯಸ್ಯ, ಹೌದು! ನಾನು ಯಾವಾಗಲೂ ಸೀತೆಯನ್ನೇ ಸ್ಮರಿಸುತ್ತಿರುವೆನು.

ವಿದೂ—ಆದರೆ ದೋಷದ ಸಲುವಾಗಿಯೋ ಗುಣದ ಸಲುವಾಗಿಯೊ?

ರಾಮ—ದೋಷಕ್ಕಾಗಿಯೂ ಅಲ್ಲ; ಗುಣಕ್ಕಾಗಿಯೂ ಅಲ್ಲ.

ವಿದೂ—ಇವೆರಡನ್ನೂ ಬಿಟ್ಟು ಸೀಮಂತಿನಿಯರನ್ನು ಸ್ಮರಿಸಿಕೊಳ್ಳಲು ಕಾರಣವೇನು?

ರಾಮ—ಪ್ರೇಮಾವೇಶವು ಕಾರಣಮೂಲವೆಂಬುದು ಇತರದಂಪತಿಗಳ ವಿಷಯಕವಾದುದು. ಸೀತಾರಾಮರ ವಿಷಯದಲ್ಲಿ ಹಾಗಲ್ಲ.

॥ ಅಶ್ವಹರ ॥

ಚಿರಕಾಲಂ ಸುಖದುಃಖಂಗಳೊಳಾ
ವರಿಸಿರ್ದುಂ ಗುಣದೋಷೇಕ್ಷಣಮೇಂ!
ಬೆರೆತಿರ್ಪಾತ್ಮದ ವೊಲ್ಸೀತೆಯೊಳುಂ
ನೆರೆದೊಂದಾದುದು ಭಾವಂ ನಿಜದಿಂ ॥ ೫ ॥

ವಿದೂ—ಗೆಳೆಯ, ಸುಮಕೋಮಲೆಯಾದ ವೈದೇಹಿಯನ್ನು ಪ್ರಿಯಾಲಾಪಗಳಿಂದ ವಂಚಿಸಿದ ಹಾಗೆ ನಮ್ಮಲ್ಲಿಯೂ ಆಡಿಕೊಳ್ಳುವೆಯಾ? ಹೀಗೆ ಮಾತಾಡುತ್ತಿರುವ ನೀನು ಸೀತಾದೇವಿಯಿಲ್ಲದೇನೇ—

ರಾಮ—ರಾಮನು ಏಕಾಂತದಲ್ಲಿ ಸೀತೆಯ ವಿಷಯವಾಗಿ ನಿರಾಶನೆಂದು ನೀನು ತಿಳಿದುಕೊಳ್ಳಬಾರದು. ನನಗಾದರೋ—

ಕಂದ ॥ ಒಳಗನುರಾಗಂ ಮೃದುಲಂ
ಮುಳಿದಿರಲದು ಬಾಹ್ಯದಲ್ಲಿ ತೋರದು ಸಹಜಂ ।
ನಳಿನದ ನಾಳಂ ಕಠಿನಂ
ತಳೆಯದೆ ಸುಕುಮಾರತಂತುಜಾಲಮನೊಳಗಂ ॥ ೬ ॥

ವಿದೂ—ವಡವಾಗ್ನಿಯನ್ನು ಒಳಗೊಂಡಿರುವ ಮಹೋದಧಿಯಂತೆ ನೀನು ಅತಿಪ್ರಬಲವಾದ ಹೃದಯತಾಪದಿಂದ ಪೀಡಿತನಾಗಿ ಮಹಿಮೆಯೊಂದಿಗೆ ಕುಗ್ಗುತ್ತಿರುವೆ. ನಾನಾದರೋ ಸ್ವಭಾವದಿಂದಲೇ ದುರ್ಬಲನಾದಕಾರಣ ಸೀತಾದೇವಿಯ ಗತಿಯನ್ನು ಸ್ಮರಿಸಿಕೊಂಡ ಕೂಡಲೆ ಕಾಳ್ಕಿಚ್ಚಿನಿಂದ ಅದೃಶ್ಯವಾಗುವ ಮಂಜಿನ ಹನಿಯ ಹಾಗೆ ಹೇಳಹೆಸರಿಲ್ಲದಂತೆ ಬತ್ತಿಹೋಗುತ್ತಿರುವೆನು.

(ಎಂದು ಗಟ್ಟಿಯಾಗಿ ಅಳತೊಡಗುವನು)

ರಾಮ—ಸೀತೆಯು ಸ್ಮರಿಸತಕ್ಕವಳೆಂದು ನೀನು ತಿಳಿದುಕೊಂಡಿದ್ದೆಯಾದರೆ ಆಕೆಯನ್ನು ಪರಿತ್ಯಜಿಸಲು ಪ್ರವೃತ್ತನಾಗಿದ್ದ ನನ್ನನ್ನು ಏಕೆ ತಡೆಯದೆ ಹೋದೆ?

ವಿದೂ—ಪ್ರಸನ್ನನಾಗಿದ್ದರೂ ಅರಸನೊಡನೆ ಸೇವಕರು ವಿಜ್ಞಾಪಿಸಿಕೊಳ್ಳುವುದು ಕಷ್ಟಸಾಧ್ಯವಾಗಿರುವಾಗ ರೋಷಭೀಷಣನಾಗಿರಲು ಹೇಳುವುದೇನು?

ರಾಮ—ಗೆಳೆಯ, ನಮ್ಮಂತಹ ಜನರು ಮಿತ್ರರನ್ನೂ ಲಕ್ಷಿಸದಿರುವ ಕೋಪಕ್ಕೆ ಒಳಗಾಗುವುದಿಲ್ಲವಷ್ಟೆ!

ಕಂದ ॥ ಅರಸಂ ದುರಂತಕಾರ್ಯದೆ
ನಿರತನಿರಲ್ಕವನ ತಡೆವುದುಚಿತಂ ಸಚಿವರ್ ।
ತಿರೆಯಂ ಸಂತಪಿಸುತ್ತಿರೆ
ತರಣಿಯನಾ ಮೇಘಮಂಡಲಂ ತಡೆಯದೆ ಪೇಳ್ ॥ ೭ ॥

ಮಿತ್ರನೇ, ಸೀತಾವಿಷಯಕವಾದ ಕಥೆಯು ನಮ್ಮಿಬ್ಬರಿಗೂ ಸಂತಾಪಕರವೇ ಸರಿ. ಈಗ ನೀನು ದ್ವಾರಪಾಲಕರಲ್ಲಿಗೆ ಹೋಗಿ "ತಪೋಧನರು ನೆರಿಯುವ ಕಾಲವು ಸಮೀಪಿಸುತ್ತ ಬಂತು. ದ್ವಾರಪಾಲಕರೆಲ್ಲರೂ ಜಾಗ್ರತೆಯಿಂದ ನೋಡಿಕೊಳ್ಳಬೇಕು" ಎಂದು ಅವರನ್ನು ಆಜ್ಞಾಪಿಸಬೇಕು.

ವಿದೂ– ಎಲೈ ರಾಜನೆ, ಗೆಡ್ಡೆಗೆಣಸುಗಳನ್ನೂ ಹಣ್ಣುಹಂಪಲಗಳನ್ನೂ ತಿಂದು ವಲ್ಕಲಗಳನ್ನು ಧರಿಸಿ ಉದ್ದುದ್ದ ಕೋಲುಗಳನ್ನು ಊರಿಕೊಳ್ಳುತ್ತ ಕಾಲಕಳೆಯುತ್ತಿರುವ ಇವರನ್ನು ಗೌರವದಿಂದ ಕಾಣಬೇಕೆ?

ರಾಮ—ನಿನ್ನ ಸಂದೇಹವು ಯುಕ್ತವಾದುದಲ್ಲ. ಸ್ಥಾವರಜಂಗಮಾತ್ಮಕವಾದ ಪ್ರಪಂಚಕ್ಕೆ ಹೇತುವಾದ ಪರಬ್ರಹ್ಮನಿಗೂ ನಿದಾನಗಳಾದ ಸಕಲ ಪುರುಷಾರ್ಥಗಳನ್ನೂ ತಕ್ಕ ರೀತಿಯಿಂದ ಬೋಧಿಸುವುದೇ ಜ್ಞಾನಸಂಪತ್ತಿನ ಫಲವು. ನೋಡು—



॥ ಮಹಾಸ್ರಗ್ಧರೆ ॥

ಪಿರಿದುಂ ಪೆರ್ಜ್ಯೋತಿಯಂತಃಸ್ಥಿತಮೆನಲದುವೇಂ ಬಾಹ್ಯದೊಳ್ ಶ್ರೀರುತಿರ್ಕುಂ
ಪರಮಾರ್ಥಜ್ಞಾನಿತಾಂತಂ ಪ್ರಕಟಿಸಲದು ಲೋಕಕ್ಕೆ ತಾಂ ವೇದ್ಯಮಕ್ಕುಂ ।
ಉರಿಯೆಂದಾ ವಹ್ನಿನಾಮಂ ನೆಲಸಿರಲದು ತಾಂ ಜ್ವಾಲೆಯಂ ಬೀರ್ವುದೇನಾ
ಮರುತಂ ಬೀಸುತ್ತೆ ಸೇರಲ್ಬರದಿನುರಿವುದಂ ಲೋಕಮೇನೋಳ್ಪುದೆಂತುಂ॥೮॥

ವಿದೂ—ತಪೋಧನರ ಸಮಾಗಮದಿಂದ ಅಷ್ಟೊಂದು ಪ್ರಯೋಜನವಾಗುವುದಾದರೆ ನಾನು ಕೂಡ ಬೇಗನೆ ಹೋಗಿ ನಿನ್ನ ಅಪ್ಪಣೆಯನ್ನೇ ಅನುಸರಿಸುವೆನು. (ಎಂದು ಹೊರಟು ಹೋಗಿ ಮರಳಿ ಬಂದು) ಓಹೋ! ಆಶ್ಚರ್ಯವೇ ಸರಿ. ನಾನೀಗ ಅರಸನ ಅಪ್ಪಣೆಯ ಮೇರೆಗೆ ಪ್ರತೀಹಾರಭೂಮಿಯನ್ನು ಸೇರಿದಾಗ–ಶ್ಯಾಮಲವರ್ಣದಿಂದ ಕಂಗೊಳಿಸುತ್ತ ತಾರುಣ್ಯವಿನ್ನೂ ಪ್ರವೇಶಿಸದೆ ತೋರಣಸ್ತಂಭಗಳನ್ನು ಆಶ್ರೈಸಿದ ಮಂಗಳಕರಗಳಾದ ಮೊಳಕೆಗಳೋ ಎಂಬ ಹಾಗೆ ಬಾಲಭಾವದಿಂದ ಕಂಗೊಳಿಸುತ್ತ ಅಸಮಾಪ್ತ ಪ್ರಮಾಣರಂತೆ ಪ್ರಮಾದಶೂನ್ಯರೂ, ರೂಪಸಂಪತ್ತಿನಿಂದ ಉನ್ನತರೆನಿಸಿದ ಅನಿಮಿಷರಂತೆ ನಿಶ್ಚಲರೂ, ಬಾಲಭಾವದಿಂದ ಚಂಚಲರಂತೆ ತೋರಿದರೂ ಮಹಾಬಲಯುತರೂ, ಅತಿಧೀರರೂ, ಲಲಿತಾಕಾರಸಂಪನ್ನರೂ, ನಿರ್ದುಷ್ಟ ಸ್ವಭಾವಭೂಷಿತರೂ ಎನಿಸಿ ನಿನ್ನನ್ನೇ ಹೋಲುತ್ತಿರುವ ಇಬ್ಬರು ತಾಪಸ ಕುಮಾರರು ಬಾಗಿಲ ಬಳಿಯಲ್ಲಿ ಬಂದಿರುವುದನ್ನು ಕಂಡೆನು.

ರಾಮ—(ಕುತೂಹಲದೊಡನೆ) ನನ್ನ ಇದಿರಿಗೆ ಬರಲು ಅವರಿಗೆ ಪ್ರತಿಬಂಧಕವೇನು?

ವಿದೂ—ಬಾಲಭಾವಲಲಿತರಾದ ಅವರಿಬ್ಬರ ಕುತೂಹಲಯುಕ್ತವಾದ ಉಪನ್ಯಾಸವನ್ನಾದರೂ ಕೇಳು.

ರಾಮ—ಅದೇನು ಹೇಳು!

ವಿದೂ — ಅವರಿಬ್ಬರೂ ವಾಲ್ಮೀಕಿಮಹರ್ಷಿಯ ಶಿಷ್ಯರು. ವೀಣೆಯನ್ನು ನುಡಿಸುವುದರಲ್ಲಿ ಪ್ರವೀಣರು. ಅವರು ತಮ್ಮೊಳಗೆ ಅಲ್ಲಿ ಹೀಗೆ ಮಾತಾಡಿಕೊಳ್ಳುತ್ತಿದ್ದರು–"ಆ ರಾಜರ್ಷಿಯ ಜನರು ತಪೋಧನರಲ್ಲಿ ವಿಶೇಷವಾದ ಬಹುಮಾನವುಳ್ಳವರಾದ ಕಾರಣ ನಮ್ಮಂತೆಯೇ ನೆಲದಲ್ಲಿ ಕುಳಿತುಕೊಳ್ಳುವರು. ಆದುದರಿಂದ ರಾಜನ ಇದಿರಲ್ಲಿ ನಾವು ಅಂತಹ ಸಮುದಾಚಾರವನ್ನೇ ನೆರವೇರಿಸಬೇಕು. ಅಷ್ಟು ಮಾತ್ರವಲ್ಲದೆ, ಮಹಾಕವಿವಿರಚಿತವಾದುದರಿಂದ ಅಪೂರ್ವವೂ, ವಿಶೇಷಾರ್ಥಗರ್ಭಿತವಾದುದರಿಂದ ಗಂಭೀರವೂ, ಛಂದೋಗರ್ಭಿತವಾಗಿರುವುದರಿಂದ ಸಾಮವೇದದಂತೆ ಗಾನಮಾಡಲು ಯೋಗ್ಯವೂ, ಸುಕುಮಾರಗಳಾದ ಅಕ್ಷರವಿನ್ಯಾಸಗ್ರಥಿತವಾದುದರಿಂದ ರಮಣೀಯವೂ, ಮಹಾಪುರುಷನ ಸಚ್ಚರಿತ್ರೆಯನ್ನೊಳಗೊಂಡಿರುವುದರಿಂದ ರಸಗರ್ಭಿತವೂ ಆಗಿರುವ ಮಹಾಕಾವ್ಯವನ್ನು ನಾವು ವೀಣಾಧ್ವನಿಯೊಡನೆ ಗಾನಮಾಡಬೇಕು. ಆ ಸಂದರ್ಭದಲ್ಲಿ ನಮ್ಮ ವಿಜ್ಞಾನವಿಶೇಷದಿಂದ ಪ್ರಸನ್ನಹೃದಯನಾದ ಅರಸನ ಭಾವವು ಹೇಗೆ ಹೇಗೆ ಪರಿವರ್ತನೆಹೊಂದುವುದೆಂಬುದನ್ನು ಜಾಗರೂಕತೆಯಿಂದ ತಿಳಿದುಕೊಳ್ಳಬೇಕು ಎಂಬುದಾಗಿ ಭಗವಂತನಾದ ವಾಲ್ಮೀಕಿಮಹರ್ಷಿಯ ಅಪ್ಪಣೆಯಾಗಿರುವುದು" ಎಂದು.

ರಾಮ — ಅವರ ತಿಳುವಳಿಕೆಯು ಎಷ್ಟು ಹೆಮ್ಮೆಯನ್ನು ಹೊರಪಡಿಸುವುದು. ಅವರ ವಾಣಿಯ ಧೋರಣೆಯೂ ಗಂಭೀರವಾದುದು. ಗೆಳೆಯನೇ, ಬಹುಸಮಯದ ವರೆಗೂ ಕಾದಿದ್ದೆವೆಂಬ ಬೇಸರದಿಂದ ಅವರು ಹಿಂದಿರುಗಿ ಹೋಗಬಹುದು. ಆದುದರಿಂದ ಅವರ ಇಷ್ಟದಂತೆಯೇ ಆಗಲಿ ಎಂದು ಹೇಳಿ ಅವರನ್ನು ಬೇಗನೆ ಬರಮಾಡು.

ವಿದೂ — ಈಗ ಅಂತಹ ಬೇಸರಕ್ಕೆ ಅವಕಾಶವಿಲ್ಲ. ಅವರ ಪರಸ್ಪರವಾದ ಭ್ರಾತೃಪ್ರೇಮಪರಿಪೂರ್ಣತೆಯನ್ನೂ ಆಕಾರಸಾಮ್ಯವನ್ನೂ ಕಾಕಪಕ್ಷಭೂಷಿತವಾದ ಮುಖಮಂಡಲವನ್ನೂ ಕಂಡು ದಶರಥಮಹಾರಾಜನು ಬದುಕಿದ್ದಾಗ ರಾಮಲಕ್ಷ್ಮಣರೂ ಹೀಗೆಯೇ ರಾಜಸ್ಥಾನವನ್ನು ಅಲಂಕರಿಸುತ್ತಿದ್ದರು ಎಂಬುದಾಗಿ ನಿಮ್ಮ ಬಾಲಭಾವವನ್ನೂ ಮಹಾರಾಜನನ್ನೂ ನೆನಪಾಗುವಂತೆ ಮಾಡುತ್ತ ಕಂಬನಿದುಂಬಿದ ಕಂಚುಕಿಗಳ ಪ್ರಶ್ನೆಗಳಿಗೆ ಉತ್ತರಕೊಡುತ್ತ ನಿಂತಿರುವರು.

ರಾಮ — ಅವರ ಆಕೃತಿಯು ನಮ್ಮ ಬಾಲಭಾವವನ್ನು ಅನುಕರಿಸುತ್ತಿರುವುದೇನು?

ವಿದೂ — ಹೌದು.

ರಾಮ — ನನ್ನ ಕುತೂಹಲವು ಹೆಚ್ಚಾಗುತ್ತಿದೆ. ಆದುದರಿಂದ ಬೇಗನೆ ಬರಮಾಡು.

ವಿದೂ — ಅಪ್ಪಣೆಯಂತಾಗಲಿ. (ಎಂದು ತೆರಳುವನು)

(ಬಳಿಕ ವಿದೂಷಕನನ್ನು ಅನುಸರಿಸುತ್ತ ತಾಪಸವೇಷತಳೆದ ಕುಶಲವರು ಪ್ರವೇಶಿಸುವರು)

ವಿದೂ — ಪೂಜ್ಯರು ಹೀಗೆ ಬರಬೇಕು (ಹಾಗೆಯೇ ನಡೆದು ಬರುವರು)

ಕುಶ —(ಇತರರಿಗೆ ಕೇಳಿಸದಂತೆ ಮರೆಯಾಗಿ ನಿಂತು) ವತ್ಸ! ಲವ, ಭಗವಂತನಾದ ವಾಲ್ಮೀಕಿಯ ಆಜ್ಞೆಯಂತೆ ಜನನಿಯನ್ನು ವಂದಿಸಿ ನಾನು ಅರಸನ ವಸತಿಯ ಇದಿರಾಗಿ ಹೊರಟು ಬರುತ್ತಿದ್ದಾಗ ಕಾಕಪಕ್ಷಗಳನ್ನು ಸರಿಪಡಿಸುವಂತೆ ಸಂಜ್ಞೆಮಾಡಿ ಪರ್ಣಶಾಲೆಯೊಳಗೆ ಬರಮಾಡಿಕೊಂಡು ಮಂಗಳಸ್ವರೂಪನಾದ ನಿನ್ನೊಡನೆ ಮಾತ್ರ ಜನನಿಯು ಹೇಳಿದ ರಹಸ್ಯವೇನು ?

ಲವ — ಮರೆಮಾಜುವಂತಹ ಸಂಗತಿಯೇನೂ ಇಲ್ಲ. ಆದರೆ ಆಗ ತಾಪಸರಿಂದ ನಿಬಿಡವಾಗಿದ್ದ ಪರ್ಣಶಾಲೆಯ ಒಳಭಾಗಕ್ಕೆ ಕರೆದೊಯ್ದು ತೋಳುಗಳನ್ನು ಚಾಚಿ ಕೃಶೋದರದಿಂದ ಬಿಗಿದಪ್ಪಿ ತಕ್ಕೈಸಿ ಮುದ್ದಾಡಿ ಚೆಲ್ವಾದ ಗಲ್ಲವನ್ನು ಸವರುತ್ತ ಸಂದೇಹದೊಡಗೂಡಿ ಸೀತ್ಕಾರಮಂದಹಾಸಗಳೊಡನೆ ತನ್ನ ಮೋರೆಯನ್ನು ನನ್ನ ಮುಖಕ್ಕೆ ಅಡ್ಡವಾಗಿ ಇರಿಸಿ — "ವತ್ಸ. ನೀವಿಬ್ಬರೂ ನಿಮ್ಮ ಸಹಜವಾದ ಹೆಮ್ಮೆಯನ್ನು ಬಿಟ್ಟು ನಮಸ್ಕರಿಸುತ್ತ ಅರಸನನ್ನು ಸತ್ಕರಿಸಬೇಕು. ಆತನ ಕುಶಲವಾರ್ತೆಯನ್ನು ಕುರಿತು ಪ್ರಶ್ನಿಸಬೇಕು." ಎಂದು ಆಜ್ಞೆಮಾಡಿದಳು:

ಕುಶ — ಕುಶಲಪ್ರಶ್ನೆಮಾಡುವುದು ಸರಿ! ಆದರೆ ನಮಸ್ಕರಿಸುವುದು ಹೇಗೆ ?

ಲವ — ಅದೇನು ?

ಕುಶ — ನಮ್ಮ ವಂಶದವರು ನಮಸ್ಕಾರ ಮಾಡುವವರಲ್ಲವಲ್ಲಾ !

ಲವ — ಹಾಗೆ ಹೇಳಿದವರಾರು ?

ಕುಶ — ಜನನಿಯು.

ಲವ — ನಮಸ್ಕಾರ ಮಾಡಬೇಕೆಂದೂ ಆಕೆಯೇ ಆಜ್ಞಾಪಿಸಿರುವಳು. ಹಿರಿಯರ ಅಪ್ಪಣೆಗಳ ಕುರಿತು ಚರ್ಚಿಸಬಾರದಲ್ಲವೆ ?

ಕುಶ — ಇರಲಿ! ಹೋಗುವ! ಮುಂದೆ ಅಲ್ಲಿ ಸಂದರ್ಭೋಚಿತವಾಗಿ ನಡೆದುಕೊಳ್ಳಬಹುದು. (ಎಂದು ನಡೆಯುವರು)

ವಿದೂ — ಪೂಜ್ಯರು ಇತ್ತಿತ್ತ ಬರಬೇಕು.

ರಾಮ — (ನೋಡಿ) ಆ ಹುಡುಗರಿಬ್ಬರೂ ಕೌಶಿಕನನ್ನು ಅನುಸರಿಸುತ್ತ ಇಲ್ಲಿಗೇ ಬರುತ್ತಿರುವರು. ಇವರನ್ನು ನೋಡಿ ನನ್ನನ್ನೇ ನಾನು ಮರೆತಂತೆ ಇರುವೆನಲ್ಲಾ! ಹೀಗಾಗಲು ಕಾರಣವೇನಿರಬಹುದು?

ಕಂದ ॥ ಇನಿತುಂ ಪರಿಚಯಮಪ್ಪೊಡ
ಮೆನಗಿಲ್ಲಂ ತಿಳಿಯದಿವರ ವಾರ್ತೆಯುಮೀ ದ-।
ರ್ಶನಮಾತ್ರದಿಂದಲೇ ಲೋ-
ಚನಯುಗಳಂ ಬಾಷ್ಪದಿಂದೆ ತುಂಬಿದುದೇಕೋ ॥ ೯ ॥

ಅಥವಾ ಇಲ್ಲಿ ಆಶ್ಚರ್ಯವೇನು?

ಕಂದ ॥ ಬಾಂಧವ್ಯಮನರಿಯದೆಯುಂ
ಬಂಧುಗಳೊರ್ಮೊದಲ ನೋಟದಿಂ ಮನಮೆಳೆವರ್ ।
ಬಂಧುರಚಂದ್ರೋಪಲಮೇಂ
ಬಾಂಧವ್ಯಮನರಿತು ಚಂದ್ರನುದಯದೊಳೊಸರ್ಗುಂ?॥೧೦॥

ಇವರ ಆಕೃತಿಯು ಹೇಗಿರುವುದೆಂದು ಕಣ್ಣಾರೆ ನೋಡುವೆನು! ಇದೇನು? ನೋಡುವುದಕ್ಕೂ ಸಾಧ್ಯವಾಗುವುದಿಲ್ಲ? ಇವರನ್ನು ನೋಡಿದ ಹಾಗೆಲ್ಲಾ ನನ್ನ ಅಂತರಂಗವು ಅಭೂತಪೂರ್ವವಾದ ಸಾಧ್ವಸಪ್ರಹರ್ಷಶೋಕದಯಾರಸಗಳಿಂದ ಪೂರಿತವಾಗಿ ವಿಚಿತ್ರತರವಾದ ಅವಸ್ಥೆಗೆ ಗುರಿಯಾಗಿ ಮೂರ್ಛೆಯಂತೆ ನನ್ನನ್ನು ಪರವಶಗೊಳಿಸುತ್ತಿರುವುದು. (ಎಂದು ಮೂರ್ಛೆಯನ್ನು ಅಭಿನಯಿಸಿ) ಹೀಗೆ ಕಂಬನಿಸುರಿಯಲು ಕಾರಣವೇನು? ಬಾಷ್ಪಪಾತದಿಂದ ನನ್ನ ಹೃದಯದ ಜಾಡ್ಯವು ಶಾಂತವಾಗಿ ನೆಮ್ಮದಿಯುಂಟಾದಂತಿದೆ. ಈಗ ಕಂಬನಿಯ ವೇಗವು ಕಡಿಮೆಯಾಗಿರುವುದರಿಂದ ಇನ್ನೊಮ್ಮೆ ನೋಡುವೆನು. (ಸರಿಯಾಗಿ ನೋಡಿ) ಆಕೃತಿವಿಶೇಷವು ಗಂಭೀರವಾಗಿಯೂ ಉದಾರವಾಗಿಯೂ ಇರುವುದು. ವೇಷರಚನೆಯು ಪ್ರಶಾಂತಮನೋಹರವಾಗಿರುವುದು. ವಿನಯದಿಂದ ಕೂಡಿ ಮನಸ್ಸನ್ನು ಸೆಳೆಯುವ ಗತಿವಿಶೇಷವು. ಈ ತರಳರು ಮಹಾಕುಲಪ್ರಸೂತರೆಂಬುದರಲ್ಲಿ ಸಂಶಯವಿಲ್ಲ.

ವಿದೂ — ಮಹಾರಾಜನು ಇಲ್ಲಿರುವನು. ಪೂಜ್ಯರು ಇಷ್ಟಾನುಸಾರವಾಗಿ ಆತನ ಸಮೀಪಕ್ಕೆ ದಯಮಾಡಿಸಬಹುದು.

ಕುಶ—ವತ್ಸ ಲವ, ನಮುಸ್ಕಾರದ ವಿಷಯವಾಗಿ ಆಗ ನಾನು ಹೇಳಿದುದು ನೆನಪಿದೆಯಷ್ಟೆ?

ಲವ—ಹೌದು! ಈಗ ವಿಶೇಷವೇನು?

ಕುಶ—ಈಗ ಅರಸನ ಸಮೀಪಕ್ಕೆ ಬಂದಂತೆಯೇ ನನ್ನ ಹೃದಯದಲ್ಲಿ ಯಾವುದೋ ಒಂದು ಬಗೆಯಾದ ಗಾಬರಿಯು ತಲೆದೋರಿ ನನ್ನ ಅಂಗಾಂಗಗಳನ್ನೇ ಸ್ವಾಧೀನವಿಲ್ಲದಂತೆ ಮಾಡಿರುವುದು. ಯಾವ ಕಾರಣದಿಂದಲೋ ನನ್ನ ಹೆಮ್ಮೆಯೆಲ್ಲವೂ ಕುಗ್ಗಿರುವುದು. ಈತನ ಮುಂದೆ ಬಾಗಿದ ತಲೆಯನ್ನು ಮೇಲೆತ್ತುವುದಕ್ಕೂ ಅಶಕ್ತನಾಗಿರುವೆನು. ಹೆಚ್ಚು ಹೇಳುವುದರಿಂದೇನು? ನಾನು ನಮಸ್ಕರಿಸಿದೆನು.

ಲವ—ಏನಿದು! ಆರ್ಯನಂತೆಯೇ ನಾನೂ ಪರತಂತ್ರನಾದೆನಲ್ಲಾ! (ಎಂದಿಬ್ಬರೂ ನಮಸ್ಕರಿಸುವರು)

ರಾಮ—ತಾವು ಮರ್ಯಾದೆಯನ್ನು ಅತಿಕ್ರಮಿಸಬಾರದು. ಏನು! ನಮಸ್ಕರಿಸಿಬಿಟ್ಟರೆ? ಹಾ ಕಷ್ಟವೆ! ಬ್ರಾಹ್ಮಣರ ಉತ್ತಮಾಂಗದಿಂದ ನಮಸ್ಕೃತನಾದೆನೆ? (ಎಂದು ವಿಚಾರಪರನಾಗಿರುವನು)

ವಿದೂ—ಮಹಾರಾಜನೇ, ನೀನೇಕೆ ವ್ಯಸನಪಡುತ್ತಿರುವೆ? ಇವರ ನಮಸ್ಕಾರವನ್ನು ಸ್ವೀಕರಿಸದಿರುವೆಯಲ್ಲ! ಈ ವಿಷಯದಲ್ಲಿ ನಿನಗೇನೂ ಕೊರತೆಯಿಲ್ಲ.

ರಾಮ—ಕೌಶಿಕನು ಸರಿಯಾಗಿಯೇ ತಿಳಕೊಂಡನು (ಕುಶಲವರನ್ನು ಕುರಿತು) ದಾಕ್ಷಿಣ್ಯಭರದಿಂದ ವಿನಯವನ್ನು ಪ್ರಕಟಿಸುತ್ತಿರುವ ಪೂಜ್ಯರೆ, ಲಾಲಿಸಬೇಕು—

ಕಂದ ॥ ಅತಿಸಂಭ್ರಮದಿಂದಂ ವಿರ
ಚಿತವಾದ ನಿಮುತ್ತು ವಿನತಿಯೆಮ್ಮಭಿಮತದಿಂ ।
ಕ್ಷಿತಿಸಂಪೂಜ್ಯರ ಗುರುಪದ
ಕತಿವಿನಯದ ಕಾಣ್ಕೆಯಾಗಲೆಂದಾಶಿಪೆನಾಂ ॥ ೧೧ ॥

ವಿದೂ—ಪ್ರಿಯಮಿತ್ರನ ಶಾಸನವು ಅಪ್ರತಿಹತವಾದುದು. ಆದುದರಿಂದ ಮಾಡಿದ ನಮಸ್ಕಾರವು ಸತ್ಫಲದಾಯಕವಾಗುವುದರಲ್ಲಿ ಸಂಶಯವಿಲ್ಲ.

ಕುಶಲವರು—(ಎದ್ದು ನಿಂತು) ಮಹಾರಾಜನಿಗೆ ಕುಶಲವಷ್ಟೆ?

ರಾಮ—ತಮ್ಮ ದರ್ಶನಲಾಭದಿಂದ ಕುಶಲವೇ ಸರಿ. ತಮ್ಮಿಂದ ನಾನು ಕುಶಲಪ್ರಶ್ನೆಗೆ ಪಾತ್ರನೇ ಹೊರತು ಅತಿಥಿಜನಯೋಗ್ಯವಾದ ಕಂಠ

ಗ್ರಹಣಕ್ಕೆ ಯೋಗ್ಯನಲ್ಲವೆ? (ಎಂದು ಬಿಗಿದಪ್ಪಿ) ಆಹಾ! ಸ್ಪರ್ಶವು ಎಷ್ಟೊಂದು ಹೃದಯಾಹ್ಲಾದಕವಾಗಿರುವುದು! (ಎಂದು ಸ್ವಲ್ಪ ಯೋಚಿಸಿ) ನಾನು ಪುತ್ರಾಲಿಂಗನಸೌಖ್ಯವನ್ನು ಅರಿತವನಲ್ಲ, ಆದರೂ ಅದಕ್ಕೆ ಸಮಾನವಾದ ಸೌಖ್ಯವನ್ನೇ ಅನುಭವಿಸುತ್ತಿರುವೆನು. ಗೃಹಸ್ಥರು ತಪೋವನದ ದೆಸೆಯಿಂದ ವಿಮುಖರಾಗಿ ಸಂಸಾರದಲ್ಲಿ ಪರಿಭ್ರಮಿಸುತ್ತಿರುವುದು ಯುಕ್ತವೇ ಸರಿ. (ಎಂದು ಹೇಳುತ್ತ ಅವರಿಬ್ಬರನ್ನೂ ಅರ್ಧಾಸನದಲ್ಲಿ ಕುಳ್ಳಿರಿಸುವನು)

ಕುಶಲವರು— ಇದು ರಾಜಾಸನವಷ್ಟೆ! ನಾವು ಇದರ ಮೇಲೆ ಕುಳಿತುಕೊಳ್ಳುವುದು ಸರಿಯಲ್ಲ.

ರಾಮ— ಅಂತರದಲ್ಲಿ ಏನಾದರೊಂದು ತಡೆಯಿದ್ದರೆ ಆಚಾರಕ್ಕೆ ಚ್ಯುತಿಯುಂಟಾಗಲಾರದು. ನನ್ನ ತೊಡೆಯಿಂದ ವ್ಯವಧಾನವುಳ್ಳ ಸಿಂಹಾಸನದ ಮೇಲೆ ಕುಳಿತುಕೊಳ್ಳಬಹುದು. (ಎಂದು ತನ್ನ ತೊಡೆಯ ಮೇಲೆ ಕುಳ್ಳಿರಿಸಿಕೊಳ್ಳುವನು)

ಕುಶಲವರು—(ಇಚ್ಛೆಯಿಲ್ಲದಿರುವುದನ್ನು ಸೂಚಿಸುತ್ತ) ರಾಜನೆ, ದರ್ಶನಮಾತ್ರದಿಂದಲೇ ಸಂತುಷ್ಟರಾಗಿರುವ ನಮ್ಮಲ್ಲಿ ಇಂತಹ ದಾಕ್ಷಿಣ್ಯವನ್ನು ತೋರಿಸಿಕೊಳ್ಳಬೇಕಾಗಿಲ್ಲ.

ರಾಮ— ಬಹಳವಾಗಿ ನೀವು ಸಂಕೋಚಪಡುವ ಕಾರಣವಿಲ್ಲ—

ಕಂದ ॥ ವರುಷದ ಕಾರಣದಿಂದಲೆ
ಪುರುಷರ್ಬಾಲಕರ ಲಾಲಿಪಂದಮಿದುಚಿತಂ ।
ಹರನ ಜಟಾಜೂಟದೆ ಹಿಮ
ಕಿರಣಂ ಶಿಶುವೆನಿಸಿ ಮೆರೆಯನೇ ಕೇದಗೆವೋಲ್ ॥ ೧೨ ॥

(ಎಂದು ಹೇಳುತ್ತ ಕಂಬನಿಯೊಡಗೂಡಿ ಅವರನ್ನೇ ನೋಡುತ್ತ ಮರಳಿ ಆಲಿಂಗಿಸುವನು. ಬಳಿಕ ವಿದೂಷಕನನ್ನು ನೋಡಿ)

ಗೆಳೆಯ, ಸೀತೆಯನ್ನು ದೇಶದಿಂದ ಹೊರಡಿಸಿ ಎಷ್ಟು ವರುಷಗಳು ಕಳೆದು ಹೋಗಿರಬಹುದೆಂದು ನಿನಗೆ ಜ್ಞಾಪಕವಿದೆಯೋ?

ವಿದೂ—(ಯೋಚಿಸಿ) ಈ ಮಂದಭಾಗ್ಯನಿಗೆ ಜ್ಞಾಪಕವಿದೆ (ಎಂದು ಕೈ ಬೆರಳುಗಳನ್ನೂ ಸಾಲದುದಕ್ಕೆ ಕಾಲಿನ ಮೂರು ಬೆರಳುಗಳನ್ನೂ ಎಣಿಸಿ ತೋರಿಸಿ) ವಿಶೇಷವಾಗಿ ಲೆಕ್ಕಮಾಡುವುದರಿಂದೇನು? ನೀನು ಸೀತಾದೇವಿಯನ್ನು ಪರಿತ್ಯಾಗಮಾಡಿ ಹತ್ತು ವರುಷಗಳು ದಾಟಿದುವೆಂದು ಧಾರಾಳವಾಗಿ ಹೇಳುವೆನು.

ರಾಮ—(ಬಾಲಕರನ್ನು ಸರಿಯಾಗಿ ನೋಡಿ) ಗರ್ಭವು ಸುಖಪ್ರಸವವಾಗಿ ಯಾರಾದರೂ ಸಂರಕ್ಷಿಸಿದ್ದರೆ ಈಗ ಅದೂ ಇಷ್ಟರಮಟ್ಟಿಗೆ ಆಗುತ್ತಿದ್ದಿತು.

ವಿದೂ—ಪರಿತ್ಯಾಗಮಾಡಿದ ಮೇಲೆ ಯಾವ ಸಂಗತಿಯೂ ತಿಳಿಯದಿರುವ ಮಕ್ಕಳ ಸಮಾಚಾರವನ್ನು ಕೇಳಿ ನಿರ್ಭಾಗ್ಯನಾದ ನಾನು ಮಂಕನಾದೆನಲ್ಲಾ! (ಎಂದು ಅಳುವನು)

ರಾಮ—ಈ ತಾಪಸಕುಮಾರರನ್ನು ನೋಡಿ ನಾನು ಯಾವುದೋ ಒಂದು ಬಗೆಯಾದ ಅಸಹ್ಯವೇದನೆಗೆ ಗುರಿಯಾಗಿರುವೆನು!

॥ ವಂಶಸ್ಥ ॥

ಎನಿತ್ತೆನಿತ್ತುಂ ನಿಜಪುತ್ರನಂದಮಂ
ಮನಕ್ಕೆ ತಂದೂಹಿಪನೋ ಪ್ರವಾಸಿ ಮ- ।
ತ್ತನಿತ್ತು ಬನ್ನಂಬಡೆ ನೋಡಿ ಜಾತನಂ
ತನತ್ತು ಚಿತ್ತಾದ್ರ್ರತೆಯೊಂದುಗುಂ ದಿಟಂ ॥ ೧೩ ॥

(ಎಂದು ಬಾಲಕರನ್ನು ಆಲಿಂಗಿಸಿಕೊಂಡು ಅಳುವನು)

ವಿದೂ—(ಸಂಭ್ರಮದಿಂದ) ಅಯ್ಯೋ ಬಿಡು ಬಿಡು! ಹಾವು! ತಾಪಸಕುಮಾರರು ಎಲ್ಲಿಯಾದರೂ ಬದುಕಿರಲಿ! ಸಿಂಹಾಸನದಿಂದ ಕೆಳಗಿಳಿಯಲಿ!

ರಾಮ—(ಗಾಬರಿಯಿಂದ ಬಾಲಕರನ್ನು ಬಿಟ್ಟು) ಮಿತ್ರನೆ, ಏನಿದು?

ವಿದೂ—ರಘುವಂಶೋತ್ಪನ್ನರಲ್ಲದವರು ಯಾರಾದರೂ ಸರಿಯೆ, ಈ ಸಿಂಹಾಸನವನ್ನು ಏರಿದರೆಂದರೆ ಅವರ ತಲೆಯು ನೂರಾರು ಭಾಗವಾಗಿ ಒಡೆದು ಹೋಗುವುದು ಎಂದು ಸಾಕೇತನಿವಾಸಿಗಳಾದ ವೃದ್ಧರ ಮುಖದಿಂದ ಕೇಳಿ ತಿಳಿದಿರುವೆನು.

ರಾಮ—(ಉದ್ವೇಗದೊಡನೆ) ಬೇಗನೆ ಇಳಿಯಿರಿ.

(ಕುಶಲವರಿಬ್ಬರೂ ಇಳಿದು ನೆಲದಮೇಲೆ ಕುಳಿತುಕೊಳ್ಳುವರು.)

ರಾಮ—(ಕುಶಲವರನ್ನು ಕುರಿತು) ನೀವಿಬ್ಬರೂ ಸುಖವಾಗಿರುವಿರಷ್ಟೆ? ನಿಮ್ಮಿಬ್ಬರ ತಲೆಯಲ್ಲೂ ಯಾವ ವಿಕಾರವೂ ಇಲ್ಲವಷ್ಟೆ?

ಕುಶಲವರು—ಅಯ್ಯಾ, ನಾವು ಸುಖವಾಗಿಯೇ ಇರುವೆವು. ನಮ್ಮ ತಲೆಯಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ.

ವಿದೂ—ಆಹಾ! ಯಾವ ಕುಂದೂ ಇಲ್ಲದೆ ಸ್ವಾಭಾವಿಕವಾಗಿಯೇ ಇರುವರೆಂಬುದು ಆಶ್ಚರ್ಯವೇ ಸರಿ!

ರಾಮ— ಈ ವಿಷಯದಲ್ಲಿ ಆಶ್ಚರ್ಯವೇನೂ ಇಲ್ಲ. (ಎಂದು ಕುಮಾರಕರನ್ನು ತೋರಿಸಿ ವಿದೂಷಕನೊಡನೆ) ತಪಸ್ವಿಗಳ ಶರೀರಗಳು ಶುಭಪರಂಪರೆಗಳ ಸಲುವಾಗಿಯೇ ಸ್ವೀಕೃತಗಳಾಗಿರುವುವು. ನೋಡು—

ಕಂದ ॥ ವ್ರತದಿಂ ವರ್ಣಿತಮೂರ್ತಿಗ
ಳತಿಮಹಿಮರ್ನಾಂಟದವರ ದೇಹಕೆ ಬಾಣಂ।
ಶತಮುಖನ ಕುಲಿಶಕೋಟಿಯು
ಮತಿಕುಂಠಿತಮೆನಿಸಲವರ ಮಹಿಮೆಯಮೋಘಂ ॥ ೧೪ ॥

(ಎಂದು ಕುಶಲವರನ್ನು ಕುರಿತು) ಇದೇಕೆ ನೀವು ಬರಿಯ ನೆಲದಲ್ಲಿ ಕುಳಿತಿರುವಿರಿ ?

ಕುಶಲವರು—ಮಹಾರಾಜನೆ, ಇದು ನಾವು ಮೊದಲೇ ನಿಶ್ಚಯಿಸಿದ್ದ ವಿಷಯವು.

ರಾಮ— ಹಾಗೆ ನಿಶ್ಚಯಮಾಡಿದ್ದಿರೊ ?

ವಿದೂ— ಮಹಾರಾಜನೆ, ಇವರಿಬ್ಬರೂ ಅತಿಥಿಗಳಷ್ಟೆ! ಆದುದರಿಂದ ಕಥಾಸಲ್ಲಾಪಗಳ ಮೂಲಕ ಅತಿಥಿಸತ್ಕಾರವನ್ನು ನೆರವೇರಿಸು.

ರಾಮ—(ಕುಶಲವರನ್ನು ಕುರಿತು) ನಿಮ್ಮ ಸೌಂದರ್ಯವನ್ನು ನೋಡಿ ಉಂಟಾದ ಕುತೂಹಲದಿಂದ ಮನಸೋತು ಪ್ರಶ್ನೆಮಾಡುವೆನು—"ನಿಮ್ಮಿಬ್ಬರ ಜನ್ಮದೀಕ್ಷೆಗಳಿಂದ ಅಲಂಕೃತಗಳಾದ ವರ್ಣಾಶ್ರಮಗಳು ಯಾವುವು ?

ಕುಶ—(ಲವನಿಗೆ ಸಂಜ್ಞೆಮಾಡುವನು)

ಲವ— ಎರಡನೆಯ ವರ್ಣವು; ಮೊದಲನೆಯ ಆಶ್ರಮವು.

ರಾಮ—(ಸ್ವಗತಂ) ಇವರು ಅಗ್ರಜನ್ಮರಲ್ಲ. ಇವರು ನಮಸ್ಕರಿಸಿದುದೂ ನನಗಿಂತ ಕೀಳಾದ ಆಸನವನ್ನು ಪರಿಗ್ರಹಿಸಿದುದೂ ದೊಡ್ಡ ತಪ್ಪಾಗುವುದಿಲ್ಲ. (ಪ್ರಕಾಶಂ) ಹಾಗಾದರೆ, ಕ್ಷತ್ರಿಯಕುಲಪಿತಾಮಹರೆನಿಸಿದ ಸೂರ್ಯಚಂದ್ರರಲ್ಲಿ ನಿಮ್ಮ ವಂಶದ ಮೂಲಪುರುಷನು ಯಾವನಾಗಿರಬಹುದು ?

ಲವ— ಭಗವಂತನಾದ ಸಹಸ್ರಕಿರಣನು.

ರಾಮ— ಓಹೋ ! ನಮ್ಮ ವಂಶೀಯರೇ ಆಗಿರುವಿರಿ.

ವಿದೂ— ಇದೇನು ! ನಿಮ್ಮಿಬ್ಬರದೂ ಒಂದೇ ಪ್ರತ್ಯುತ್ತರವೇ ?

ರಾಮ— ನಿಮ್ಮಿಬ್ಬರಿಗೂ ಪರಸ್ಪರ ಸಂಬಂಧವಿರುವುದೇ ?

ಲವ— ನಾವಿಬ್ಬರೂ ಒಡಹುಟ್ಟಿದ ಅಣ್ಣತಮ್ಮಂದಿರು.

ರಾಮ — ಆಕೃತಿಯೇ ಇದನ್ನು ಸೂಚಿಸುತ್ತಿರುವುದು. ಆದರೆ ವಯಸ್ಸಿನಲ್ಲಿ ಸ್ವಲ್ಪವೂ ವ್ಯತ್ಯಾಸವಿರುವಂತೆ ತೋರುವುದಿಲ್ಲ.

ಲವ — ನಾವಿಬ್ಬರೂ ಅವಳಿಮಕ್ಕಳು.

ರಾಮ — ಈಗ ಸರಿಯಾಯಿತು. ಹಾಗಾದರೆ ನಿಮ್ಮಿಬ್ಬರಲ್ಲಿ ಹಿರಿಯವನಾವನು? ಹೆಸರೇನು?

ಲವ — (ಕೈಗಳನ್ನು ಜೋಡಿಸಿಕೊಂಡು ತೋರಿಸುತ್ತ) ಆರ್ಯನ ಪಾದಾಭಿವಂದನೆಯಲ್ಲಿ ನನ್ನ ಹೆಸರನ್ನು "ಲವ"ನೆಂದು ಅರಿಕೆಮಾಡುವೆನು. (ಎಂದು ಹೇಳಿ ಕುಶನನ್ನು ತೋರಿಸಿ) ಆರ್ಯನು ಗುರುಚರಣವಂದನೆಯಲ್ಲಿ (ಎಂದು ಹೇಳಿ ಮುಂದೆ ಮಾತನಾಡುವುದಕ್ಕೆ ತೋರದೆ ಸುಮ್ಮನಾಗುವನು)

ಕುಶ — ನಾನೂ ನನ್ನ ಹೆಸರನ್ನು "ಕುಶ"ನೆಂದು ಬಿನ್ನೈಸಿಕೊಳ್ಳುವೆನು.

ರಾಮ — ಆಹಾ! ಇವರ ನಡೆತೆಯು ಎಷ್ಟೊಂದು ಗಂಭೀರವಾಗಿಯೂ ಮನೋಹರವಾಗಿಯೂ ಇರುವುದು.

ವಿದೂ — ಹೆಸರುಗಳೇನೋ ತಿಳಿದುವು. ಹಿರಿಯವನು ಆವನೆಂದು ಮಾತ್ರ ಉತ್ತರ ದೊರೆಯಲಿಲ್ಲ.

ರಾಮ — ಅಂಜಲಿನಿರ್ದೇಶದಿಂದಲೂ ಹೆಸರು ಹಿಡಿದು ಹೇಳದಿರುವುದರಿಂದಲೂ ಕುಶನೇ ಹಿರಿಯವನೆಂಬುದು ಉತ್ತರವಲ್ಲವೆ?

ವಿದೂ — ಈಗ ಸ್ಪಷ್ಟವಾಗಿ ತಿಳಿಯಿತು.

ರಾಮ — ನಿಮ್ಮ ಗುರುವಿನ ಹೆಸರೇನು?

ಲವ — ವಾಲ್ಮೀಕಿಮುನಿಯೆಂದು.

ರಾಮ — ಯಾವ ಸಂಬಂಧದಿಂದ?

ಲವ — ಉಪನಯನದಿಂದಲೂ ವಿದ್ಯೋಪದೇಶದಿಂದಲೂ.

ರಾಮ — ನಿಮ್ಮಿಬ್ಬರ ಶರೀರಕ್ಕೆ ಕಾರಣಭೂತನಾದ ತಂದೆ ಯಾರೆಂದು ತಿಳಿಯಲು ಬಯಸುವೆನು.

ಲವ — ಆತನ ಹೆಸರನ್ನು ನಾವರಿಯೆವು. ಈ ತಪೋವನದಲ್ಲಿ ಯಾರೊಬ್ಬರೂ ಆತನ ಹೆಸರನ್ನು ಉಚ್ಚರಿಸುವುದಿಲ್ಲ.

ರಾಮ — ಆಹಾ! ಮಹಿಮೆಯೇ!

ಕುಶ — ಆತನ ಹೆಸರನ್ನು ನಾನು ಬಲ್ಲೆನು.

ರಾಮ — ಹೇಳೋಣಾಗಲಿ.

ಕುಶ —“ನಿರನುಕ್ರೋಶ”ನೆಂದು.

ರಾಮ—(ವಿದೂಷಕನೊಡನೆ) ಅಪೂರ್ವವಾದ ಹೆಸರಲ್ಲವೆ?

ವಿದೂ—(ಯೋಚಿಸಿ ರಾಮನೊಂದಿಗೆ) ಹೀಗೆ ಕೇಳಿ ನೋಡುವೆನು! (ಪ್ರಕಾಶಂ) ನಿರನುಕ್ರೋಶನೆಂದು ಹೇಳುವವರಾರು?

ಕುಶ—ಜನನಿಯು!

ವಿದೂ—ಏನು! ಸಿಟ್ಟು ಬಂದಾಗ ಹೀಗೆ ಹೇಳುವಳೋ? ಅಥವಾ ಸಹಜವಾಗಿಯೇ ಹೀಗೆನ್ನುವಳೊ?

ಕುಶ—ನಾವು ಬಾಲಭಾವಸಹಜವಾದ ತುಂಟತನ ಮಾಡುತ್ತಿರುವುದನ್ನು ನೋಡಿದರೆ "ನಿರನುಕ್ರೋಶನ ಪುತ್ರರೇ! ತುಂಟತನ ಮಾಡದಿರಿ" ಎಂದು ಗದರಿಸುವಳು.

ವಿದೂ—ಇವರ ತಂದೆಯ ಹೆಸರು ನಿರನುಕ್ರೋಶನೆಂಬುದು ವ್ಯಕ್ತವಾಯಿತು. ಹಾಗಾದರೆ ಇವರ ಜನನಿಯು ಆತನಿಂದ ಅವಮಾನಿತೆಯಾಗಿ ಪ್ರವಾಸವನ್ನು ಅನುಭವಿಸುತ್ತ ಆತನ ಮೇಲೆ ತನ್ನ ಅಧಿಕಾರವನ್ನು ನಡೆಯಿಸಲಾರದೆ ಈ ಮಾತಿನಿಂದ ಮಕ್ಕಳನ್ನು ಗದರಿಸುವಳೆಂದು ತೋರುವುದು.

ರಾಮ—(ಸ್ವಗತಂ) ಕೌಶಿಕನು ಚೆನ್ನಾಗಿ ಊಹಿಸಿದನು. (ಎಂದು ನಿಟ್ಟುಸಿರುಬಿಟ್ಟು) ಇಂತಹ ನನ್ನ ಜೀವನವು ವ್ಯರ್ಥವೇ ಸರಿ. ಆ ತಪಸ್ವಿನಿಯು ನನ್ನ ಅಪರಾಧದ ಸಲುವಾಗಿ ತನ್ನ ಮಕ್ಕಳನ್ನು ಕ್ರೋಧಗರ್ಭಿತವಾಕ್ಯಗಳಿಂದ ಗದರಿಸುವಳು. (ಎಂದು ಕಂಬನಿಯೊಡನೆ ಕುಶಲವರನ್ನು ನೋಡಿ) ಆ ನಿರನುಕ್ರೋಶನು ನಿಮ್ಮ ಆಶ್ರಮದಲ್ಲೇ ಇರುವನೆ?

ಲವ—ಇಲ್ಲ.

ರಾಮ—(ಸಂಭ್ರಮದೊಡನೆ) ಆತನ ಸಮಾಚಾರವಾದರೂ ಕೇಳಬರುವುದೆ?

ಲವ—(ಕುಶನ ಮುಖವನ್ನು ನೋಡುವನು)

ಕುಶ—ಈ ತನಕ ನಾವು ಆತನ ಪಾದವಂದನೆಗಳನ್ನು ಮಾಡಿಲ್ಲ. ಜನನಿಯು ಏಕವೇಣೀಧಾರಿಣಿಯಾಗಿರುವುದರಿಂದ ಆತನು ಬದುಕಿರುವನೆಂಬುದು ವ್ಯಕ್ತವಾಗುವುದು.

ರಾಮ—ನೀವೆಂದಾದರೂ ಆತನಿಂದ ಲಾಲನೆಯನ್ನು ಪಡೆದಿರುವಿರಾ?

ಕುಶ—ಅದೂ ಇಲ್ಲ.

ರಾಮ—ಈ ಪ್ರವಾಸವು ಅತಿದೀರ್ಘವಾಗಿಯೂ ಭಯಂಕರವಾಗಿಯೂ ಇರುವುದು. ಇಷ್ಟು ಕಾಲವಾದರೂ ನೀವು ಒಬ್ಬರನ್ನೊಬ್ಬರು ನೋಡದಿರುವಿರಲ್ಲಾ! (ವಿದೂಷಕನೊಡನೆ ಜನಾಂತಿಕಂ) ನನಗೆ ಕುತೂಹಲವು ಅಧಿಕವಾಗಿರುವುದರಿಂದ ಇವರ ಜನನಿಯ ಹೆಸರನ್ನು ತಿಳಿಯಲು ಅಪೇಕ್ಷಿಸುವೆನು. ಆದರೆ, ಸ್ತ್ರೀವಿಷಯಕವಾಗಿ ಅದರಲ್ಲಿಯೂ ತಪೋವನದಲ್ಲಿ ನಾನು ಪ್ರಶ್ನಿಸುವುದು ಸರಿಯಲ್ಲ. ಅದಕ್ಕಿರುವ ಉಪಾಯವೇನು?

ವಿದೂ—(ಜನಾಂತಿಕಂ) ಬ್ರಾಹ್ಮಣಜಾತಿಯು ಅಪ್ರತಿಹತವಾದ ವಾಕ್ಪ್ರಭಾವವುಳ್ಳುದಲ್ಲವೆ? ಆದುದರಿಂದ ನಾನೇ ಕೇಳುವೆನು. (ಪ್ರಕಾಶಂ) ಬಾಲಕರೇ, ನಿಮ್ಮ ಜನನಿಯ ಹೆಸರೇನು?

ಲವ—ಆಕೆಗೆ ಎರಡು ಹೆಸರುಗಳು.

ವಿದೂ—ಅವು ಹೇಗೆ?

ಲವ—ತಪೋವನವಾಸಿಗಳೆಲ್ಲರೂ "ದೇವಿ"ಯೆಂದು ಕರೆಯುವರು. ಭಗವಂತನಾದ ವಾಲ್ಮೀಕಿಯು "ವಧೂ" ಎಂಬುದಾಗಿ ವ್ಯವಹರಿಸುವನು.

ರಾಮ—ವಾಲ್ಮೀಕಿಮುಖದಿಂದ ಹೊರಡುವ "ವಧೂ" ಶಬ್ದವು ಯಾವ ಕ್ಷತ್ರಿಯಕುಲವನ್ನು ವೃದ್ಧಿಗೊಳಿಸುವುದೊ?

ವಿದೂ—ಕ್ಷತ್ರಿಯಕುಲವು ವಿಶಾಲವಾಗಿ ವ್ಯಾಪಿಸಿರುವುದರಿಂದ ಇಂತಹ ಕುಲವೆಂದು ತಿಳಿಯುವುದಕ್ಕೆ ಸಾಧ್ಯವಿಲ್ಲ.

ರಾಮ—ಗೆಳೆಯ, ಇತ್ತ! ಇನ್ನೊಂದು ನಿಮಿಷ!

ವಿದೂ—(ಸಮೀಪಕ್ಕೆ ಬಂದು) ಆಜ್ಞೆಯಾಗಲಿ!

ರಾಮ—(ಜನಾಂತಿಕಂ) ಈ ಬಾಲಕರ ಮತ್ತು ನಮ್ಮ ಕುಟುಂಬದ ಸಮಾಚಾರವು ಎಲ್ಲಾ ವಿಧಗಳಿಂದಲೂ ಹೋಲುತ್ತಿರುವುದಲ್ಲವೆ?

ವಿದೂ—ಅದು ಹೇಗೆ?

ರಾಮ—ನೋಡು! ಈ ಹುಡುಗರಿಗೂ ಸೀತೆಯ ಗರ್ಭಕ್ಕೂ ವಯಸ್ಸು ಸಮಾನವಾಗಿರುವುದು; ಇವರೂ ಕ್ಷತ್ರಿಯರು; ಮಾತ್ರವಲ್ಲದೆ ಸೂರ್ಯವಂಶದವರು; ಹುಟ್ಟುವುದರ ಮೊದಲೇ ಪ್ರವಾಸಕ್ಕೆ ಗುರಿಯಾದರು; ರಾಜಾಸನವನ್ನು ಏರಿಯೂ ವಿಕಾರವೇನೂ ಇಲ್ಲದವರು; ಇವರ ಜನಕನ ವಿಷಯದಲ್ಲಿ ಕ್ರೂರತನವನ್ನು ಸೂಚಿಸುವ "ನಿರನುಕ್ರೋಶ" ಶಬ್ದವು ರೂಢಿಗೆ ಬಂದಿರುವುದು; ಜನನಿಗೆ ಮಹತ್ವಸೂಚಕವಾದ "ದೇವಿ"ಯೆಂಬ ಶಬ್ದವು ವ್ಯವ

ಹಾರದಲ್ಲಿರುವುದು; ಹೇಗೆ ನೋಡಿದರೂ ಹೋಲಿಕೆಯು ಸರಿಯಾಗಿರುವುದ ರಿಂದ ಮಂದಭಾಗ್ಯನಾದ ನಾನು ಬಹುವ್ಯಾಕುಲನಾಗಿರುವೆನು. (ಎಂದು ಚಿಂತೆಯನ್ನು ಅಭಿನಯಿಸುವನು)

ವಿದೂ—ಏನು! ಈ ತರಳರು ಸೀತಾಗರ್ಭಸಂಭೂತರೆಂದು ನಿನ್ನ ಅಭಿಪ್ರಾಯವೆ?

ರಾಮ—ಅಲ್ಲ, ಹಾಗಲ್ಲ! ತಪೋವನವಾಸಿಗಳಾದ ಜನರ ವಿಷಯ ದಲ್ಲಿ ಇಂತಹ ಸಂಬಂಧವನ್ನು ಹೇಗೆ ತಾನೇ ಆರೋಪಿಸಲಿ? ಆದರೆ—

॥ ಚಂಪಕಮಾಲೆ ॥

ನಿರುಕಿಸಲೀ ಕುಮಾರಯುಗಮಂ ಸಮಮಾದ ವಯಃಪ್ರಮಾಣಮುಂ
ಸರಿಯೆನೆ ಶ್ಯಾಮಲೋನ್ನತಶರೀರಮುಮಂತಿರಲೀ ಪ್ರವಾಸಮುಂ ।
ಪರಿಕಿಸಲೇಕವಂಶಮುಮೆನಲ್ಪಡೆದಿರ್ಕುಮೆ ಸೀತೆ ಕಾಡೊಳೆಂ
ದಿರದೆ ಬಳಲ್ದು ಮನ್ಮನಮಿದೀ ಪರಿ ಚಂಚಲಮೊಂದುತಿರ್ಪುದೈ ॥೧೫॥

(ಎಂದು ಚಿಂತಾಶೋಕಪೀಡಿತನಾಗುವನು)

(ತೆರೆಯಲ್ಲಿ)

ಇಕ್ಷ್ವಾಕುವಂಶಕುಮಾರರಾದ ಪೂಜ್ಯಕುಶಲವರ ಬಳಿಯಲ್ಲಿ ಇರ ತಕ್ಕವರಾರು?

ಕುಶಲವರು—(ಆಲಿಸಿ) ನಾವಿಬ್ಬರೂ ಸಿದ್ಧರಾಗಿಯೇ ಇರುವೆವು.

(ಮರಳಿ ತೆರೆಯಲ್ಲಿ)

ಅದೇಕೆ ನೀವು ಇಷ್ಟು ಹೊತ್ತಾದರೂ ನಿಮ್ಮ ನಿಯೋಗದ ವಿಷಯ ದಲ್ಲಿ ಉದಾಸೀನರಾಗಿರುವಿರಿ?

ಕಂದ ॥ ಒರೆದಂ ಪುರಾಣಪುರುಷನ
ಚರಿತೆಯನಾ ಮುನಿಪನೆನಿಪ ವಾಲ್ಮೀಕಿಯುದಂ ।
ನಿರವಿಪುದು ರಾಮನಿದಿರೊಳ್
ಪರಿವುದರಿಂ ಮೊದಲೆ ಪಗಲ ಸವನದ ಕಾಲಂ ।೧೬॥

ಕುಶಲವರು—ಅರಸನೆ, ಉಪಾಧ್ಯಾಯದೂತನು ನಮ್ಮನ್ನು ತ್ವರೆಗೊಳಿ ಸುತ್ತಿರುವನು.

ರಾಮ—ವಿಶೇಷವಾದ ಪ್ರಯೋಜನವನ್ನೊದಗಿಸುವ ಮುನಿನಿಯೋಗ ವು ನಮಗೂ ಸಂಭಾವನೀಯವು. ಹೇಗೆಂದರೆ—

॥ ಮಹೋತ್ಪಲಮಾಲೆ ॥

ಗಾಯಕರಿಲ್ಲಿ ನೀವ್ ಕವಿವರಂ ಮುನಿಪುಂಗವನಾಗಿರೆವಿಶ್ವರಕ್ಷಕಂ
ನಾಯಕನಾ ಪುರಾಣಪುರುಷಂ ಕಮಲೇಕ್ಷಣನೆನ್ನಲುದಾತ್ತವಸ್ತುವೆಂ-।
ಬಾಯತಿಯಿಂದೆ ಭಾರತಿ ಧರಾತಳದಲ್ಲವತಾರಮನೊಂದಿ ಬಂದಳೆಂ-
ಬಾಯದ ಕಾವ್ಯಮಿಂತಿದು ಪವಿತ್ರರನಾಗಿಸದಿರ್ಕುಮೆ ಶ್ರೋತೃವರ್ಗಮಂ
॥ ೧೭ ॥

(ವಿದೂಷಕನನ್ನು ಕುರಿತು) ವಯಸ್ಯ, ಮಾನವಲೋಕದಲ್ಲಿ ಹೀಗೆ ಸರಸ್ವತಿಯ ಅವತಾರವು ಅಪೂರ್ವವಾದುದು. ಆದ್ದರಿಂದ ನಾನು ಮಿತ್ರವರ್ಗ ಸಮಾನನಾಗಿದ್ದುಕೊಂಡು ಕೇಳಲಿಚ್ಛಿಸುವೆನು. ಸಭಾಸದರನ್ನೆಲ್ಲಾ ಬರಮಾಡು. ನಮ್ಮ ಸಮೀಪಕ್ಕೆ ಸೌಮಿತ್ರಿಯನ್ನು ಬರಹೇಳು. ನಾನೀಗ ಒಂದೆಡೆಯಲ್ಲೇ ಬಹಳ ಸಮಯ ಕುಳಿತಿದ್ದುದರಿಂದ ಬಾಲಕರಿಗೆ ಉಂಟಾದ ಆಯಾಸವನ್ನು ಅತ್ತಿತ್ತ ಸುಳಿದಾಡುವಂತೆ ಮಾಡಿ ನಿವಾರಣೆಗೊಳಿಸುವೆನು.

(ಎಂದೆಲ್ಲರೂ ತೆರಳುವರು)

---

## ಷಷ್ಠಾಂಕಂ

(ಬಳಿಕ ಕಂಚುಕಿಯು ಪ್ರವೇಶಿಸುವನು)

ಕಂಚುಕಿ— ಕೌಶಿಕನು ಹೇಳಿದಂತೆಯೇ ದೊರೆಯ ಆಜ್ಞೆಯನ್ನು ನೆರವೇರಿಸಿದೆನು. ಈಗ ನಾನು ಇಲ್ಲಿರುವ ಸ್ವಾಮಿಯನ್ನು ನೋಡುವೆನು. (ಹಾಗೆಯೇ ಮಾಡಿ) ಓಹೋ! ಸ್ವಾಮಿಯು ಇಲ್ಲೇ ಬಂದನು—

ಕಂದ ॥ ಪಿರಿದುಂ ಸುಶೀಲರಂ ಮೂ-
ವರ ನೊಡಗೂಡುತ್ತಲಿತ್ತಲೆಯ್ತುರ್ಪರಸಂ ।
ಮೆರೆವಾಮ್ನಾಯಗಳಿಂದಂ
ಪರಿಶೋಭಿಪ ತುರಗಯಾಗದಂತೆವೊಲೆಸೆಗುಂ ॥ ೧ ॥

(ಬಳಿಕ ಕುಶಲವರಿಂದ ಅನುಸರಿಸಲ್ಪಡುವ ರಾಮನು ಲಕ್ಷ್ಮಣನೊಂದಿಗೆ ಪ್ರವೇಶಿಸುವನು. ಎಲ್ಲರೂ ಸುತ್ತಲೂ ಆವರಿಸಿಕೊಳ್ಳುವರು)

ಕಂಚುಕಿ—(ಸಮೀಪಿಸಿ) ಆರ್ಯನಿಗೆ ಜಯವಾಗಲಿ! ಇದು ಆಸ್ಥಾನ ಮಂಟಪವು! ಪೀಠವು ಸಿದ್ಧವಾಗಿರುವುದು. (ಎಲ್ಲರೂ ಕುಳಿತುಕೊಳ್ಳುವರು) ಸ್ವಾಮಿಯು ಇತ್ತ ಅವಧರಿಸಬೇಕು! ರಘುವಂಶಜರೂ ಪುರಪ್ರಮುಖರೂ ಪ್ರಜಾವರ್ಗದವರೂ ಸ್ವಾಮಿಯನ್ನು ಸಂಭಾವಿಸುತ್ತಿರುವರು.

ರಾಮ—(ನೋಡಿ) ಇದೇನು! ನಮ್ಮ ಸಮೀಪದಲ್ಲೇ ತೆರೆಯನ್ನು ಇಳಿಸಿರುವರು?

ಕಂಚುಕಿ—

ಕಂದ ॥ ಪಿರಿಯರಸನ ಮಾದೇವಿಯ
ರಿರವೆಯ್ತಂದಿರ್ಪರಿಲ್ಲಿ ಕೌಸಲ್ಯಾದ್ಯರ್ ।
ತೆರೆಯೊಳಗಿರ್ಪುದು ನಿಜಸೋ-
ದರರ ವಧೂತ್ರಿತಯಮಿಂತು ರಾಣೀವಾಸಂ ॥ ೨ ॥

ಲಕ್ಷ್ಮಣ—(ಕಂಚುಕಿಯನ್ನು ಕುರಿತು) ಆರ್ಯ, ವೈದೇಹಿಯನ್ನೂ ದೇವಿಯರೊಡನೆ ಎಣಿಸಬೇಕು, ಅಲ್ಲದೆ ಸೊಸೆಯಂದಿರೊಂದಿಗೆ ಪರಿಗಣಿಸ ಬಾರದು.

ರಾಮ—(ನಿಟ್ಟುಸಿರುಬಿಟ್ಟು) ಕಂಚುಕಿ, ನೀನು ನಿನ್ನ ಸ್ಥಾನವನ್ನು ಸೇರು.

ಕಂಚುಕಿ—ಅಪ್ಪಣೆಯಂತೆ. (ಎಂದು ತೆರಳುವನು)

ರಾಮ—ಪೂಜ್ಯರೇ, ಆರಂಭವಾಗಲಿ!

ಕುಶಲವರು— ॥ ಉಪಜಾತಿ ॥

ಕೌಸಲ್ಯೆಯಂ ಕೈಕೆಯನಾ ಸುಮಿತ್ರೆಯುಂ
ವಸುಂಧರೇಶಂ ವರಿಸುತ್ತಲೆಂದುಂ ।
ಆಸಕ್ತನಾಗುತ್ತಲೆ ಧರ್ಮಕಾರ್ಯಮಂ
ನಸುಂಧರಾಭಾರಮನಾಂತು ಗೆಯ್ದಂ ॥ ೩ ॥

ರಾಮಲಕ್ಷ್ಮಣರು—(ಸಂತೋಷದೊಡನೆ) ಕವಿಯು ನಮ್ಮ ತಂದೆಯನ್ನೇ ಕಥಾನಾಯಕನನ್ನಾಗಿ ಕಲ್ಪಿಸಿರುವನು. (ಎಂದಿಬ್ಬರೂ ಆಸನದಿಂದ ಇಳಿದು ನಮಸ್ಕರಿಸುವರು)

ಕುಶಲವರು—ಕಂದ ॥ ವರಕೌಸಲ್ಯೆಗೆ ರಾಮಂ

ಲಕ್ಷ್ಮಣ—(ನಮಸ್ಕರಿಸುವನು)

ಕುಶಲವರು—

ಭರತಂ ಕೈಕೆಗೆ ಸುಮಿತ್ರೆಗೊರ್ವಗೆ ಯಮಳರ್ ।
ವರಲಕ್ಷ್ಮಣಶತ್ರುಘ್ನರ್
ತರಳರ್ಜನಿಸುತ್ತೆ ಬಳೆದರತಿವಿಶದಯಶರ್ ॥ ೪ ॥

ರಾಮ—(ಲಕ್ಷ್ಮಣನನ್ನು ಆಲಿಂಗಿಸುವನು)

ಕುಶಲವರು—

ಕಂದ ॥ ಧರಣಿಜೆಯಂ ರಘುರಾಮಂ
ಪರಿಣಯವಾಗಲ್ಕೆ ಲಕ್ಷ್ಮಣಂಗೂರ್ಮಿಳೆಯಂ ।
ಭರತಂಗಾ ಮಾಂಡವಿಯಂ
ಪರಿಣಯವಾದತ್ತು ಶತ್ರುಹಂಗೆ ಶ್ರುತಕೀರ್ತಿಯುಮಂ ॥ ೫ ॥

ಕಂದ ॥ ಅಂತರಮಕ್ಕಳ್ ಬಾಲ್ಯವ
ಪಿಂತಿಕ್ಕುತೆ ಬಂದು ಸೇರ್ದ ಯೌವನದಿಂದಂ ।
ಕಂತುಶರಂ ಪರಿಪೀಡಿಸ
ದಂತೆಯೆ ಚೆನ್ನೆಯರ ನೆರವಿರಲ್ಸೊಗಮುಂಡರ್ ॥ ೬ ॥

ಲಕ್ಷ್ಮಣ—ರಮಣೀಯವು.

ರಾಮ—ಕಾಲಾತಿಕ್ರಮವಿಲ್ಲದೆ ಗಾನವು ನಡೆಯಲಿ!

ಕಂದ ॥ ಮಾತಿದು ಪಿಂತಣದೆಮ್ಮಯ
ತಾತಂ ಜರೆಯಿಂದೆ ಪಲಿತನಾಗಿರಲಾಮಂ- ।
ದೋತಿರೆ ಬರ್ಹಮನಾ ಸಾ
ಕೇತೋದ್ಯಾನದ ಮಹೀಜಮಿರ್ದುದು ಸಸ್ಯಂ ॥ ೭ ॥

ಕುಶಲವರು—

ಕಂದ ॥ ಭರತಂ ಮಾತುಲಗೇಹಕೆ
ತೆರಳಿರೆ ಸಭೆಯೊಂದಿಗರಸನಾಲೋಚಿಸುತುಂ ।
ಪಿರಿಯಮಗಂಗಭಿಷೇಕಿಸಿ
ಧರೆಯಂ ಪರಿಪಾಲಿಸೆಂದು ಕೊಡಲಿರ್ದಾಗಳ್ ॥ ೮ ॥

ರಾಮ—(ಸ್ವಗತಂ) ಈಗ ನಿಜವಾಗಿಯೂ ಕೈಕಾಮ್ಮನವರ ನಿಂದೆಯು ನಡೆಯಲಿರುವುದು. (ಪ್ರಕಾಶಂ) ಆ ಸಮಾಚಾರವನ್ನು ಬಿಟ್ಟು ಸೀತಾಪಹರಣದಿಂದ ಮೊದಲುಮಾಡಿ ಗಾನವಾಗಲಿ!

ಕುಶಲವರು—

ಕಂದ ॥ ಲಂಕೆಯೊಳಿರುಹಿದ ತಂಗೆಯ
ಕೊಂಕಿನ ನುಡಿಗಿರದೆ ಮಾರುವೋಗುತೆ ದುರುಳಂ ।
ಲಂಕೆಗೆ ಸೀತೆಯ ತನುವಂ
ಬಿಂಕದೆ ಕಳ್ದುಯ್ದನವಳ ಗುಣಕಿಡದಂದಂ ॥ ೯ ॥

ಲಕ್ಷ್ಮಣ—(ರಾಮನನ್ನು ನೋಡುವನು)

ಕುಶಲವರು—

ಕಂದ ॥ ಉದಧಿಗೆ ಸೇತುವ ಬಂಧಿಸಿ
ಕದನದೆ ಸಂಹರಿಸಿ ದುಷ್ಟರಂ ರಘುರಾಮಂ ।
ಮುದದಿಂ ಸೀತೆಯನೊಡಗೊಂ
ಡುದಿತಯಶಂ ಮರಳ್ದನಂದು ಸಾಕೇತಕ್ಕಂ ॥ ೧೦ ॥

ರಾಮ—ಆಹಾ! ಎಷ್ಟು ಸಂಗ್ರಹವು.

ಕುಶಲವರು— ॥ ವಂಶಸ್ಥ ॥

ಜನಾಭಿರಾಮಂ ಪ್ರತಿಪನ್ನರಾಜ್ಯನಾ
ಜನಾಪವಾದಕ್ಕುರೆ ನೊಂದ ರಾಮನಂ— ।
ದಿನಿತ್ತು ಪೇಳ್ದಂ ಬರಮಾಡಿ ತಮ್ಮನಂ
ವನಕ್ಕೆ ಕೊಂಡೊಯ್ದು ಬಿಡೆಂದು ಸೀತೆಯಂ ॥ ೧೧ ॥

ಕಂದ ॥ ಅಂತಿರೆ ರಘುರಾಮನ ಸೀ—
ಮಂತಿನಿಯನನಂತಶೋಕಪರ್ಯಾಕುಲೆಯಂ ।
ಮುಂತಣ ಪುಣ್ಯದ ರಘುಕುಲ
ಸಂತತಿಯಂ ಗರ್ಭದಲ್ಲಿ ತಳೆದಳನಾಗಳ್ ॥ ೧೨ ॥

ಕಂದ ॥ ಧರಣಿಜೆಯಂ ನಿರ್ಮಾನುಷ
ದರಣ್ಯದೊಳ್ ಹಿಂಸ್ರಜಂತುಕುಲಸೇವಿತದೊಳ್ ।
ಧರಣಿಪನಾಜ್ಞೆಗೆ ತೊರೆವುತೆ
ತೆರಳ್ದಂ ಸೌಮಿತ್ರಿ ರಾತ್ರಿಯಾಗುವ ಮುನ್ನಂ ॥ ೧೩ ॥

ಲಕ್ಷ್ಮಣ—ಲಕ್ಷ್ಮಣನು ನಿಂದಾರ್ಹನೇ ಸರಿ!

ರಾಮ—ಈ ಸಂಗತಿಯಲ್ಲಿ ನಿನ್ನ ಅಪರಾಧವೇನೂ ಇಲ್ಲ. ಇವೆಲ್ಲವೂ ರಾಮನ ವೀರವಿಲಸಿತಗಳೆಂದೇ ಪರಿಗಣಿತವಾಗುವುವು. ಆ ಬಳಿಕ?

ಕುಶಲವರು—ಗಾನವು ಇಷ್ಟೇ ಸರಿ.

ರಾಮ—(ಉದ್ವೇಗದೊಡನೆ) ಲಕ್ಷ್ಮಣ, ಎಂತಹ ಕಷ್ಟಸಂದರ್ಭವು!

ಕುಶಲವರು— ॥ ಉಪಜಾತಿ ॥

ಅನಂತರಂ ಸೀತೆ ನಿರಾಶೆಯಿಂದಂ
ವನಾಂತದಲ್ಲೆಯ್ದಿದಳೆಂದು ನಾಶಮುಂ।
ಮನಕ್ಕೆ ಖೇದಂಬರಲಾಗದೆಂಬವೊಲ್
ಮುನೀಶಸತ್ಕಾವ್ಯಕಿದೇ ವಿರಾಮಂ ॥ ೧೪ ॥

ಕುಶ—(ಜನಾಂತಿಕಂ) ಈ ಮಹಾಮಹಿಮರಿಬ್ಬರೂ ಸೀತಾವೃತ್ತಾಂತದಲ್ಲಿ ಅತ್ಯಂತ ವಿಷಣ್ಣರಾಗಿರುವರು. ಆದುದರಿಂದ ಹೀಗೆ ಕೇಳುವೆನು. (ಲಕ್ಷ್ಮಣನನ್ನು ಕುರಿತು) ತಾವಿಬ್ಬರೂ ರಾಮಾಯಣಕಥಾನಾಯಕರೆನಿಸಿದ ರಾಮಲಕ್ಷ್ಮಣರೇನು?

ಲಕ್ಷ್ಮಣ—ಕ್ಲೇಶಭಾಗಿಗಳಾದ ಅವರೇ ಸರಿ.

ಕುಶ—ಏನು! ಸೀತೆಯನ್ನು ಕರೆದೊಯ್ದವನು ನೀನೊ?

ಲಕ್ಷ್ಮಣ—(ಲಜ್ಜೆಯಿಂದ) ಹೌದು! ಅದೃಷ್ಟಹೀನನಾದ ನಾನು.

ಕುಶ—ಸೀತೆಯು ರಾಮನ ಧರ್ಮಪತ್ನಿಯೇನು?

ಲಕ್ಷ್ಮಣ—ಹೌದು.

ಕುಶ—ಆ ಮೇಲೆ ಸೀತೆಯ ಸಮಾಚಾರವಾಗಲಿ, ಗರ್ಭದ ವರ್ತಮಾನವಾಗಲಿ ಏನಾದರೂ ತಿಳಿದುಬಂದಿರುವುದೆ?

ಲಕ್ಷ್ಮಣ—ನಿಮ್ಮ ಗಾನದಿಂದ ತಿಳಿಯಿತು.

ರಾಮ—(ಸ್ವಗತಂ) ಇನ್ನು ಯಾವ ಸಂತೋಷದ ವಾರ್ತೆಯನ್ನು ತಿಳಿಸಲಿರುವನೊ? (ಯೋಚಿಸಿ) ಹೀಗೆ ಕೇಳಿ ನೋಡುವೆನು. (ಪ್ರಕಾಶಂ) ಆರ್ಯರೇ ನಿಮಗೆ ಇಷ್ಟೇ ಬರುವುದೋ ಅಥವಾ ಸಂದರ್ಭವೇ ಇಲ್ಲಿಗೆ ನಿಂತು ಹೋಗುವುದೋ?

ಕುಶ—ನಾವರಿಯೆವು.

ರಾಮ—ಕಣ್ವನನ್ನು ಕೇಳಿ ನೋಡಬೇಕು. ಸೌಮಿತ್ರಿ, ಕಣ್ವನನ್ನು ಬರಹೇಳು!

ಲಕ್ಷ್ಮಣ—(ಹೊರಟು ಹೋಗಿ ಕಣ್ವನೊಡನೆ ಪುನಃ ಪ್ರವೇಶಿಸುವನು)

ಕಣ್ವ—(ರಾಮನನ್ನು ನೋಡಿ)

ಕಂದ ॥ ಧರಣಿಜೆಯ ತರಳರಿಂದಂ
ಪರಿವೃತನೆಸಿಸಿರ್ಪ ರಾಮನೇ ಅಭಿರಾಮಂ ।
ಇರೆ ಪುಷ್ಯಪುನರ್ವಸುಗಳ್
ಸೆರೆಯೊಳ್ ಚಂದ್ರಂ ಮನೋಜ ನಲ್ಲಮೆ ನೋಡಲ್ ॥ ೧೫ ॥

ಲಕ್ಷ್ಮಣ — ಆರ್ಯನೆ, ಕಣ್ವಮುನಿಯು ಬಂದಿರುವನು.

ರಾಮ — (ಕೈಮುಗಿದು) ಇದೋ ಆಸನವು. ಕುಳಿತುಕೊಳ್ಳಬೇಕು.

ಕಣ್ವ — (ಕುಳಿತುಕೊಂಡು) ರಾಮಾಯಣವನ್ನು ಕೇಳುವ ಕುತೂಹಲವು ಇರುವುದಾದರೆ ಅಪ್ಪಣೆಯಾಗಲಿ. ಕುಶಲವರು ಎಲ್ಲಿಯು ತನಕ ಹೇಳಿರುವರು?

ಲಕ್ಷ್ಮಣ — ಕಂದ ॥ ಧರಣಿಜೆಯಂ ನಿರ್ಮಾನುಷ
ದರಣ್ಯದೊಳ್

(ಎಂಬ ಪದ್ಯವನ್ನು ಹೇಳಿ) ಕುಶಲವರ ಹಾಡು ಇಷ್ಟೇ ಕೇಳಿಸಿದುದು.

ಕಣ್ವ — ಮುಂದೆ ಕೇಳೋಣಾಗಲಿ!

ರಾಮ — ಬೇರೆ ಉಪಾಯವಿಲ್ಲ.

ಕುಶಲವರು — ಕಣ್ವನು ರಾಮನ ಧರ್ಮಪತ್ನಿಗೆ ಮಂಗಳವನ್ನು ಹಾಡುವಂತಿದೆ.

ಕಣ್ವ — ॥ ವಂಶಸ್ಥ ॥

ಅನಂತರಂ ಮೋಹಕೆ ಪೋದ ಶಿಷ್ಯರಿಂ
ಮುನೀಶ್ವರಂ ಸಂಗತಿಕೇಳ್ದು ವೇಗದಿಂ
ವನಾಂತರಕ್ಕೆಯ್ದಿ ಮಹೀಜೆಯಂ ತಪೋ-
ವನಕ್ಕೆ ತಾನೇ ಕರೆತಂದನಾ ದಿನಂ ॥ ೧೬ ॥

ರಾಮ — ಭಗವಂತನು ರಘುಕುಲವನ್ನು ಅನುಗ್ರಹಿಸಿದನು. ಮಹಾತ್ಮನಿಂದ ಉದ್ಧೃತನಾದೆನು.

ಕುಶಲವರು — ದೈವಯೋಗದಿಂದ ರಾಮಪತ್ನಿಗೆ ಕುಶಲವು.

(ಎಲ್ಲರೂ ಸಂತೋಷವನ್ನು ಅಭಿನಯಿಸುವರು)

ಕುಶ — ವತ್ಸ ಲವ, ವಾಲ್ಮೀಕಿಮುನಿಗಳ ಆಶ್ರಮದಲ್ಲಿ ಸೀತೆಯೆಂಬವಳಿರುವಳೆ?

ಲವ — ಒಬ್ಬಳೂ ಇಲ್ಲ. ಸುಮ್ಮನೆ ಹಾಡಿನಲ್ಲಿ ಮಾತ್ರ "ಸೀತೆ, ಸೀತೆ" ಯೆಂಬ ಅಕ್ಷರಗಳು.

ರಾಮ— ಆ ಬಳಿಕ?

ಕಣ್ವ—

ಕಂದ ॥ ಜನಪಾಲ! ಪೂರ್ಣಕಾಲದೊ
ಳಿನಶುಭ್ರಾಂಶುಗಳನಾ ದಿವಂ ಪಡೆವಂದಂ।
ಜನಕಜೆಯುಮೆಲ್ಲಯೋಗಮು
ಮನುಕೂಲಮಿರಲ್ಕೆ ಪುತ್ರಯುಗಮಂ ಪಡೆದಳ್ ॥ ೧೭ ॥

ಲವ— ಆರ್ಯನಿಗೆ ಜಯವಾಗಲಿ! ದೈವಯೋಗದಿಂದ ರಘುವಂಶವು ಅಭಿವೃದ್ಧಿಹೊಂದುತ್ತಿರಲಿ!

ಕುಶಲವರು— ಪುತ್ರಲಾಭದಿಂದ ಮಹಾರಾಜನಿಗೆ ಉತ್ತರೋತ್ತರವಾಗಲಿ!

ರಾಮ—(ಸ್ವಗತಂ) ಈ ಕುಶಲವರೇ ಆಗಿರಬಹುದೆ?

ಕಣ್ವ—

ಕಂದ ॥ ಜನಿಸಿರೆ ವೈದಿಕಮಾರ್ಗದ
ಸನುಮತದಿಂದವರ್ಗೆ ಜಾತಕರ್ಮಾದಿಗಳಂ।
ಮುನಿಪತಿ ನೆರವೇರಿಸುತುಂ
ಮನಮೆಚ್ಚಿದ ಪೆಸರಿನೊಡನೆ ಕುಶಲವರೆಂದಂ ॥ ೧೮ ॥

ರಾಮ— ಏನು! ಇವರೇ ಸೀತಾತನಯರೋ! ಹಾ ಪುತ್ರ ಕುಶ! ಹಾ ಪುತ್ರ ಲವ!

ಲಕ್ಷ್ಮಣ— ಏನಿದು! ದೇವೀಸಂಭವವೆನಿಸಿದ ಆರ್ಯನ ಸಂತತಿಯೆ?

ಕುಶಲವರು— ಅವನೇ ಇವನು? ಹಾ ತಾತ! ರಕ್ಷಿಸಬೇಕು.

(ಎಂದೆಲ್ಲರೂ ಪರಸ್ಪರವಾಗಿ ಆಲಿಂಗಿಸಿಕೊಂಡು ಮೈಮರೆಯುವರು)

ಕಣ್ವ—(ವಿಷಾದದೊಡನೆ) ಇದೇನು! ಬಹುಕಷ್ಟವೇ ಸಂಭವಿಸಿತಲ್ಲ!

ಕಂದ ॥ ಹಿತಮೆನಿಪ ವಾರ್ತೆಯಂ ವಿಧಿ
ಹತನೆನಿಪಾಂ ಪೇಳಲಿಂತಿದೇಂ ಸಮನಿಸಿತೋ।
ಹಿತದೊವಾರ್ತಿಂ ವಿನಿಪಾ-
ತಿತರೇ ರಘುಪುಂಗವರ್ಕಳೆಂದಾಶ್ಚರ್ಯಂ ॥ ೧೯ ॥

(ಚೆನ್ನಾಗಿ ನೋಡಿ) ದೈವಯೋಗದಿಂದ ಉಸಿರಾಡುವಂತಿದೆ! ನಾನು ಈ ವೃತ್ತಾಂತವನ್ನು ವಾಲ್ಮೀಕಿಮಹರ್ಷಿಗೂ ದೇವಿಗೂ ಅರಿಕೆಮಾಡುವೆನು. (ಎಂದು ಹೋಗುವನು)

(ಅನಂತರ ವಾಲ್ಮೀಕಿಯೂ ಸಂಭ್ರಮಿಸಿದ ಸೀತೆಯೂ ಪ್ರವೇಶಿಸುವರು)

ವಾಲ್ಮೀಕಿ— ವತ್ಸೆ, ತ್ವರೆಮಾಡು! ವಿಳಂಬಿಸಕೂಡದು! ಮೂರ್ಛೆಗೆ ಪ್ರತೀಕಾರ ಮಾಡದಿದ್ದಲ್ಲಿ ಅನರ್ಥವು ಸಂಭವಿಸುವುದು.

ಸೀತೆ— ಹೇಳಿರಿ! ಹೇಳಿರಿ! ರಘುವಂಶಸಂಭೂತರು ಪ್ರಾಣದೊಡನೆ ಇರುವರಷ್ಟೆ?

ವಾಲ್ಮೀಕಿ— ಸಂತೈಸಿಕೊ! ರಾಘವರು ಬದುಕಿರುವರು! ಶ್ವಾಸಾನಿಲವು ಸಂಚಾರವಾಗುತ್ತಿರುವುದು ಕಂಡುಬರುತ್ತಿದೆಯಷ್ಟೆ!

ಸೀತೆ— ನಿಜವಾಗಿಯೂ ತಂದೆಯ ಮಾತಿನಿಂದ ವಿಶ್ವಾಸವುಂಟಾಯಿತು.

ವಾಲ್ಮೀಕಿ—(ಪರೀಕ್ಷಿಸಿನೋಡಿದಂತೆ ಅಭಿನಯಿಸಿ)

ಕಂದ ॥ ಕಡುಧೈರ್ಯವಾಂತು ನೋಡೀ।
ಕಡೆಯೊಳ್ವೈದೇಹಿ ನಿನ್ನ ಸಂಗತಿಯೆಂಬಾ।
ಕಡೆಗಾಲದ ಗಾಳಿಗಿದೋ
ಕೆಡೆದಿರ್ಪುದು ಸೂರ್ಯವಂಶತರುನಿಕುರುಂಬಂ ॥ ೨೦ ॥

ಸೀತೆ—(ಲಜ್ಜೆಯೊಡನೆ) ಪೂಜ್ಯರೆ, ಆರ್ಯಪುತ್ರನಿಗೆ ನಾನು ಅಗೋಚರಳಾಗಿರುವೆನಷ್ಟೇ!

ವಾಲ್ಮೀಕಿ—(ಗರ್ವದಿಂದ) ನಾನಿರುವಾಗ ವಿಧಿಸುವುದಕ್ಕಾಗಲಿ ನಿಷೇಧಿಸುವುದಕ್ಕಾಗಲಿ ಸಮರ್ಥರಾದವರಾರು? ಇವರನ್ನು ನೋಡುವುದಕ್ಕಾಗಿ ನಿನಗೆ ನಾನು ಅನುಮತಿಯಿತ್ತಿರುವೆನು. ಸಂಕೋಚವಿಲ್ಲದೆ ಪತಿಯ ಸನ್ನಿಧಿಗೆ ಹೋಗು!

ಸೀತೆ—(ಸಮೀಪಿಸಿ ನೋಡಿ) ಇದೇನು ಹೀಗಿರುವನು? ಸರ್ವನಾಶವಾಯಿತೇ? ಮಂದಭಾಗಿನಿಯಾದೆನೇ? (ಎಂದು ನೆಲದಲ್ಲಿ ಬಿದ್ದು ಅಳತೊಡಗುವಳು)

ವಾಲ್ಮೀಕಿ— ಬೇಗನೆ ಎದ್ದು ಹೋಗಿ ಸಂತೈಸು! ನಾನೂ ರಾಮಲಕ್ಷ್ಮಣರನ್ನು ಉಪಚರಿಸುವೆನು. (ರಾಮಲಕ್ಷ್ಮಣರ ಬಳಿಸೇರಿ) ವತ್ಸ ರಾಮ! ವತ್ಸ ಲಕ್ಷ್ಮಣ! ಸಂತೈಸಿಕೊಳ್ಳಬೇಕು.

ಸೀತೆ— ಮಕ್ಕಳೇ ಕುಶಲವರೇ, ಸಂತೈಸಿಕೊಳ್ಳಿರಿ! ಸಂತೈಸಿಕೊಳ್ಳಿರಿ!

(ಎಂದು ಹೇಳುತ್ತ, ಮುಖದ ಮೇಲೆ ನೀರು ಚಿಮುಕಿಸುವರು)

ರಾಮ—(ಚೇತರಿಸಿಕೊಂಡು) ಆರ್ಯ ಕಣ್ವನೇ, ವೈದೇಹಿಯು ಬದುಕಿರುವಳೇ?

ವಾಲ್ಮೀಕಿ — ಮುಂದೆಯೇ ಇರುವಳಲ್ಲಾ !

ರಾಮ — (ದೃಷ್ಟಿಸಿ ನೋಡಿ) ಇದೇನು ಪೂಜ್ಯರೇ ದಯಮಾಡಿಸಿರುವರಲ್ಲಾ ! (ಎಂದು ಲಜ್ಜೆಯನ್ನು ನಟಿಸುವನು)

ವಾಲ್ಮೀಕಿ — ಸಾಕು ಸಾಕು ! ನಾಚಿಕೊಳ್ಳುವ ಕಾರಣವಿಲ್ಲ. ಕಳತ್ರ ವಿಷಯಕವಾದ ಕನಿಕರವಲ್ಲವೆ ?

ಲಕ್ಷ್ಮಣ — (ಸಂತೈಸಿಕೊಂಡು) ಆರ್ಯನು ಚೇತರಿಸಿಕೊಂಡಿರಬಹುದಷ್ಟೆ ?

ರಾಮ — ಮಂದಭಾಗ್ಯನಾದ ನಾನು ಚೇತರಿಸಿಕೊಂಡಿರುವೆನು.

ಕುಶಲವರು — (ಸಮಾಧಾನ ಹೊಂದಿ) ಹಾ ತಾತ ! ರಕ್ಷಿಸಬೇಕು ರಕ್ಷಿಸಬೇಕು.

(ಎಂದು ಪಾದಗಳಲ್ಲಿ ಬಿದ್ದು ಅಳತೊಡಗುವರು)

ರಾಮಲಕ್ಷ್ಮಣರು — (ಕುಶಲವರನ್ನು ಅಪ್ಪಿಕೊಂಡು ಸಂತೈಸುತ್ತ) ಮಕ್ಕಳೇ ಅಳಬಾರದು !

ವಾಲ್ಮೀಕಿ — ಆಹಾ ಇದೇನು ! ಪಿತೃಸಂದರ್ಶನದಿಂದ ದುಃಖಕ್ಕೆ ಒಳಗಾಗುವುದೆ ? ತರಳರಿ, ನೀವು ಯಾರ ಸಲುವಾಗಿ ಹೀಗೆ ಅಳುತ್ತಿರುವಿರಿ ? ಕಂಬನಿಯನ್ನು ಒರಸಿಕೊಳ್ಳಿರಿ !

ಕುಶಲವರು — (ಕಂಬನಿಯೊರಸಿಕೊಂಡು ರಾಮನನ್ನು ನೋಡುತ್ತ ನಿಂತುಕೊಳ್ಳುವರು)

ಸೀತೆ — (ಜನಾಂತಿಕಂ) ನಿಮ್ಮಿಬ್ಬರ ದೃಷ್ಟಿಗೂ ಗೋಚರನೆನಿಸಿದ ಇವನಾರು ?

ರಾಮ — ಆಹಾ ! ವೈದೇಹಿಯು ಬಹಳ ಕಾಲವಾದ ಮೇಲೆ ದೈವಯೋಗದಿಂದ ಸಂಘಟಿಸಿದ ನನ್ನ ಸಾನ್ನಿಧ್ಯವನ್ನು ಮುಖವಿಕಾಸದಿಂದಲಾದರೂ ಗೌರವಿಸದಿರುವಳಲ್ಲಾ ! ಇವಳ ಔದಾಸೀನ್ಯವನ್ನು ಏನೆನ್ನಲಿ !

ವಾಲ್ಮೀಕಿ — (ಕೋಪದೊಡನೆ) ಎಲೈ ರಾಜನೆ, ನೀನು ಧೃತಸೌಹಾರ್ದನು; ಮಹಾಕುಲಸಂಭೂತನು; ಕಾರ್ಯಾಕಾರ್ಯವಿಚಾರಕುಶಲನು; ಜನಕಮಹಾರಾಜನು ಧಾರಾದತ್ತವಾಗಿ ಕೊಡಲು ಪತ್ನಿಯೆಂದು ನೀನು ಪರಿಗ್ರಹಿಸಿರಲು, ದಶರಥಮಹಾರಾಜನು ಸೊಸೆಯೆಂದು ಸ್ವೀಕರಿಸಿದನು; ಅರುಂಧತಿಯು ಮಂಗಳಸಂಸ್ಕೃತೆಯೆಂದು ಕೊಂಡಾಡಿದಳು; ವಿಶುದ್ಧಚರಿತ್ರೆ

ಯುಳ್ಳ ಸಾಧ್ವಿಯೆಂದು ನಾನು ನಿರ್ಣೈಸಿದೆನು; ಅಗ್ನಿದೇವನು ಪರಿಶುದ್ಧತೆಯನ್ನು ಜನಜನಿತವಾಗಿ ಕೊಂಡಾಡಿದನು; ಕುಶಲವರಿಗೆ ಜನನಿಯೂ ಭಗವತಿಯಾದ ವಿಶ್ವಂಭರೆಗೆ ನಂದಿನಿಯೂ ಸಾಧ್ವೀಮಣಿಯೂ ಆದ ಈ ಸೀತೆಯನ್ನು ಜನಾಪವಾದಶ್ರವಣಮಾತ್ರದಿಂದಲೇ ನಿರಾಕರಿಸುವುದು ನಿನಗೆ ಯುಕ್ತವಾದುದೆ?

ರಾಮ—(ಚಿಂತಾಭಾವವನ್ನು ಅಭಿನಯಿಸುವನು)

ವಾಲ್ಮೀಕಿ—ಲಕ್ಷ್ಮಣನೇ, ಇದು ಯುಕ್ತವೇನಯ್ಯಾ? ಅಥವಾ ನಿನ್ನನ್ನು ನಿಂದಿಸಿ ಪ್ರಯೋಜನವಿಲ್ಲ. ನೀನು ಆಜ್ಞೆಯನ್ನು ನೆರವೇರಿಸತಕ್ಕ ತಮ್ಮನು. (ಎಂದು ರಾಮನನ್ನುದ್ದೇಶಿಸಿ) ವೀರನಾದ ದಶಕಂಧರನನ್ನು ಸಂಹರಿಸಿದ ಮೇಲೆ ಸೀತೆಯನ್ನು ಪರಿಗ್ರಹಿಸುವ ವಿಷಯದಲ್ಲಿ ಯಾವ ದೇವತೆಯ ಸಾಕ್ಷಿಯನ್ನು ಪ್ರಮಾಣವೆಂದು ಸ್ವೀಕರಿಸಲಾಯಿತೊ?

ರಾಮ—ಭಗವಂತನಾದ ವೈಶ್ವಾನರನ.

ವಾಲ್ಮೀಕಿ—ಹಾಗಾದರೆ ಅಂತಹ ನಂಬಿಕೆಯು ಕೆಟ್ಟುಹೋಗಲು ಕಾರಣವೇನು?

ಸೀತೆ—ಆಹಾ ಕಷ್ಟವೇ! ಮಂದಭಾಗ್ಯಳಾದ ನನ್ನ ಸಲುವಾಗಿ ಆರ್ಯಪುತ್ರನು ಇಂತಹ ನಿಂದೆಗೆ ಗುರಿಯಾದನಲ್ಲಾ! (ಎಂದು ಕಿವಿಗಳನ್ನು ಮುಚ್ಚಿಕೊಳ್ಳುವಳು)

॥ ರಥೋದ್ಧತೆ ॥

ವಾಲ್ಮೀಕಿ— ಸೀತೆ ಶುದ್ಧಳೆನೆ ಸಾಕ್ಷ್ಯದಲ್ಲಿ ತಾಂ
ಜಾತವೇದನೆ ನಿಯುಕ್ತನಾಗಿರಲ್ ।
ಹೇತುವಿಲ್ಲದ ಜನಾಪವಾದಕಂ
ಚೇತಮರ್ಪಿಸಿರೆ ನೀಂ ನಿರಂಕುಶಂ ॥ ೨೧ ॥

ರಾಮ—ಸ್ವಲ್ಪವಾದರೂ ಸೋಕಲಾರದೆ?

ವಾಲ್ಮೀಕಿ—ಏನು! ವೀರಹಸ್ತದಿಂದ ನನ್ನನ್ನೂ ತಿರಸ್ಕರಿಸುವನಲ್ಲಾ!

॥ ಚಂಪಕಮಾಲೆ ॥

ಅನುಕರಣಸ್ವಭಾವದ ಪೃಥಗ್ಜನಚಿತ್ತದೊಳಿರ್ಪ ರಾಗಮೇ
ಕೊನೆವರೆಗಿರ್ಪುದಲ್ಲದೆ ನರೇಶ್ವರಚಿತ್ತದೊಳಿಲ್ಲ ಮಾಲೆಯಂ ।
ಅನುಕರಿಸುತ್ತೆನೇಹಮದು ಬಾಹ್ಯದೊಳೊಪ್ಪುತೆ ಕಂಡುಬಂದೊಡಂ
ನೆನೆವೊಡದಿಂತುಸೈಕತದೊಳಾ ತಿಲಸಂಭವಮಾಗದಂದದಿಂ ॥ ೨೨ ॥

ವತ್ಸ, ಈ ಘರ್ಷಣದಿಂದ ಪ್ರಯೋಜನವೇನು ? ನೀನು ಕುಶಲವರನ್ನು ಪರಿಗ್ರಹಿಸು ! ನಾವಿನ್ನು ಆಶ್ರಮಕ್ಕೆ ತೆರಳುವೆವು. (ಎಂದು ಹೊರಡುವನು)

ರಾಮಲಕ್ಷ್ಮಣರು—ಪ್ರಸನ್ನರಾಗಬೇಕು ! ಪೂಜ್ಯರು ದಯಮಾಡಿಸಬಹುದು.

ವಾಲ್ಮೀಕಿ—(ಹಿಂದಕ್ಕೆ ತಿರುಗಿ) ವೈದೇಹಿ,, ಈತನು ತಪೋವನವಾಸಿಗಳಿಗೂ ದಂಡವನ್ನು ವಿಧಿಸುವನು. ಆದುದರಿಂದ ನೀನು ಆತ್ಮಶುದ್ಧಿಯನ್ನು ಮಾಡಿಕೊ !

ಸೀತೆ—ನಾನು ಎಂತಹ ಪರೀಕ್ಷೆಗೆ ಹೇಗೆ ತಾನೇ ಗುರಿಯಾಗಲಿ ?

ವಾಲ್ಮೀಕಿ—ಪಾಪವಿರಹಿತೆಯಾಗಿರುವೆಯಷ್ಟೆ !

ಸೀತೆ—(ಲಜ್ಜೆಯಿಂದ) ನಾನು ಸಭಾಮಧ್ಯದಲ್ಲಿ ನಿಂತು—“ಮಂದಭಾಗಿನಿಯೆನಿಸಿದ ಜನಕರಾಜತನೂಜೆಯು; ಅಭಿನ್ನಚಾರಿತ್ರಸಂಪನ್ನೆಯು” ಎಂದು ಹೇಳಿಕೊಳ್ಳುವೆನು.

ವಾಲ್ಮೀಕಿ—ವಿಕಾರಕ್ಕೆ ಅನುರೂಪವಾದ ಪ್ರತೀಕಾರವೆಂದು ಗಟ್ಟಿಯಾಗಿ ಸಾರಿ ಹೇಳು.

ಸೀತೆ—ಗುರುನಿಯೋಗವು ಸರ್ವಸಿದ್ಧವಾದುದು. (ಕೈಮುಗಿದು ದಿಕ್ಕುಗಳನ್ನು ನೋಡಿ) ಇಂದ್ರನೇ ಮೊದಲಾದ ಅಷ್ಟದಿಕ್ಪಾಲಕರೂ, ಅಂತರಿಕ್ಷಸಂಚಾರಿಗಳಾದ ದೇವತೆಗಳೂ, ಗಂಧರ್ವಸಿದ್ಧವಿದ್ಯಾಧರರೂ, ತಮ್ಮ ಪ್ರಭಾವದಿಂದಲೇ ಸಕಲಲೋಕರಹಸ್ಯಗಳನ್ನೂ ಪ್ರತ್ಯಕ್ಷಪಡಿಸಿಕೊಂಡಿರುವ ವಾಲ್ಮೀಕಿ ವಿಶ್ವಾಮಿತ್ರವಸಿಷ್ಠಾದಿಮಹರ್ಷಿಗಳೂ, ಸಕಲಲೋಕಶುಭಾಶುಭಕರ್ಮಸಾಕ್ಷಿಯೂ, ರಘುಕುಲಪಿತಾಮಹನೂ ಎನಿಸಿದ ಭಗವಾನ್ ಸಹಸ್ರಕಿರಣನೂ ಕೂಡ ಸೀತೆಯ ನಡತೆಯ ವಿಷಯದಲ್ಲಿ ಸತ್ಯಪ್ರಕಟನೆಗೆ ಸಾಕ್ಷೀಭೂತರಾಗಿರುವರು.

ವಾಲ್ಮೀಕಿ—ಮಹಾಪ್ರಭಾವವುಳ್ಳ ದೇವತೆಗಳನ್ನೂ ಆಕರ್ಷಿಸತಕ್ಕ ಆಶ್ಚರ್ಯಕರವಾದ ಸೀತಾಚರಿತ್ರೆಯ ಪ್ರಭಾವವನ್ನು ನೀವೆಲ್ಲರೂ ನೋಡಬೇಕು !

ಎಲ್ಲರೂ—(ವಿಸ್ಮಯದಿಂದ) ಅತ್ಯಾಶ್ಚರ್ಯವು ! ದೇವಿಯ ಮಾತು ಮುಗಿದ ಕೂಡಲೆ ಚರಾಚರಾತ್ಮಕವಾದ ನಿಖಿಲಪ್ರಪಂಚವೂ ಸರ್ವವ್ಯಾಪಾರಗಳನ್ನೂ ತೊರೆದು ದತ್ತಾವಧಾನವಾಗಿ ನಿಶ್ಶಬ್ದವಾಗಿ ಪ್ರಶಾಂತವಾಗಿ ತೋರುತ್ತಿದೆ. ಹೇಗೆಂದರೆ—

ಕಂದ ॥ ನಿಶ್ಚಲತರಂಗಮಂಬುಧಿ
ನಿಶ್ಚಲನಾಶುಗನುಮಲ್ಲದಾನೆಯ ಕಿವಿಯುಂ ।
ನಿಶ್ಚಲಮೆನೆ ಜಗಮೆಲ್ಲಂ
ನಿಶ್ಚಲಮಿಾ ಸೀತೆಯೆಂದ ನುಡಿಯುವಧರಿಸಲ್ ॥ ೨೩ ॥

ಸೀತೆ—ಸಕಲಲೋಕಗಳ ಮೇಲ್ಮೆಯ ಸಲುವಾಗಿ ದೃಢಭಾವದಿಂದ ಗುರುನಿಯೋಗವನ್ನು ನೆರವೇರಿಸಿ, ಸಾವಿರಾರು ಪರ್ವತಗಳನ್ನು ತಂದೊಟ್ಟಿ ಬಂಧಿಸಿದ ಸೇತುವೆಯಿಂದ ಸಮುದ್ರವನ್ನು ಎರಡಾಗಿಸಿ, ಸುರಾಸುರಲೋಕದಲ್ಲಿ ಏಕಧನುರ್ಧರನೆಂದು ಪ್ರಖ್ಯಾತಿಪಡೆದ ರಘುಕುಲನಂದನನಾದ ನಿನ್ನನ್ನು ಹೊರತು ಬೇರೊಬ್ಬನನ್ನು ಪಾತಿವ್ರತ್ಯವಿರುದ್ಧಭಾವನೆಯ ದೃಷ್ಟಿಯಿಂದ ನೋಡಿದ್ದರೂ ಮಾತನಾಡಿಸಿದ್ದರೂ ಮನಸ್ಸಿನಿಂದ ಭಾವಿಸಿದ್ದರೂ ಈ ನನ್ನ ಸತ್ಯವಾಕ್ಯದಂತೆ ಎಲ್ಲರಿಗೂ ಗೋಚರವಾಗುವ ಹಾಗೆ ದಿವ್ಯರೂಪವನ್ನು ತಳೆದು ಮಹಾಪ್ರಭಾವಸಂಪನ್ನೆಯೆನಿಸಿದ ಭಗವತಿಯಾದ ಭೂದೇವಿಯು ಮೈದೋರಿ ಬಂದು ನನ್ನ ಚಿತ್ತಶುದ್ಧಿಯನ್ನು ಲೋಕಕ್ಕೆ ಪ್ರಕಟಗೊಳಿಸಲಿ!

(ಎಲ್ಲರೂ ಆಶ್ಚರ್ಯವನ್ನು ಸೂಚಿಸುವರು)

ವಾಲ್ಮೀಕಿ — ಇದೇನು! ಲೋಕವೆಲ್ಲವೂ ಅವ್ಯಕ್ತಭೀಷಣವಾದ ಯಾವುದೋ ಒಂದು ರಸದಲ್ಲಿ ಮುಳುಗಿರುವುದಲ್ಲಾ!

॥ ಸ್ರಗ್ಧರೆ ॥

ನಾದಂ ಪಾತಾಳದಿಂದಂ ಭರದಿನೊಗೆದಿದೇನಂಬರಂತುಂಬುತಿರ್ಕುಂ
ಮುಂದಂ ಮುಂದಂ ದಿಗಂತಂಗಳ ಕಡೆಗುರುಳುತ್ತುಂ ಮಹೀಧ್ರಂಗಳಿರ್ಕುಂ।
ಒಂದಾಗುತ್ತುಂ ಸಮುದ್ರಂ ಭರದ ಝುಳಝುಳತ್ಕಾರದಾರಾವದಿಂದಂ
ಮುಂದೊತ್ತುತ್ತುಂ ಪ್ರತೀರಾಟವಿಗಳನೊಡನಾಲೋಡಿಕುಂ ಚಿತ್ರಮಲ್ತೇ
॥ ೨೪ ॥

ಸೀತೆ! ಈ ಲಕ್ಷಣಗಳೆಲ್ಲವೂ ನಿನ್ನ ಸಲುವಾಗಿಯೇ ಉಂಟಾದುವು. ಇನ್ನೊಮ್ಮೆ ನಿನ್ನ ಸತ್ಯವನ್ನು ಪ್ರಕಾಶಪಡಿಸು.

ಸೀತೆ—("ಸಕಲ ಲೋಕಗಳ" ಎಂಬ ಮೇಲಿನ ವಾಕ್ಯವನ್ನೇ ಉಚ್ಚರಿಸುವಳು.)

(ತೆರೆಯಲ್ಲಿ)

ಗೋವುಗಳಿಗೆ ಮಂಗಳವಾಗಲಿ! ಬ್ರಾಹ್ಮಣರಿಗೆ ಶುಭವಾಗಲಿ!! ರಘುಕುಲಕ್ಕೆ ಮೇಲ್ಮೆಯುಂಟಾಗಲಿ!!!

॥ ಮತ್ತೇಭವಿಕ್ರೀಡಿತ ॥

ಕಡುಸತ್ಯಂನುಡಿದಿರ್ಪ ಸೀತೆಗೊಲವಿಂ ವಿಶ್ವಂಭರಾದೇವಿಯೇ
ಕಡಲೊಳ್ಮೀವ ವಿಲಾಸದಿಂದೆ ಜಡದೇಹಂಬಿಟ್ಟು ಪಾತಾಳದಿಂ ।
ಕಡುರಮ್ಯಂದಳೆದಿರ್ಪ ದಿವ್ಯತನುವಂ ಶಕ್ತಿಪ್ರಭಾವಂಗಳಿಂ
ಪಡೆದೀ ಮಾನುಷಲೋಕದಲ್ಲವತರಿಪ್ಪಳ್ ನೋಡಲಿಂದದ್ಭುತಂ ॥ ೨೫ ॥

ಎಲ್ಲರೂ—(ಕಿವಿಗೊಟ್ಟು ಕೇಳಿ ಆಶ್ಚರ್ಯವನ್ನು ನಟಿಸುವರು)

ವಾಲ್ಮೀಕಿ—ಇಂತಹ ಆಶ್ಚರ್ಯಪರಂಪರೆಗಳುಳ್ಳ ವರ್ತನೆಯನ್ನು ನೀವು ಎಂದಾದರೂ ನೋಡಿದುದುಂಟೆ; ಕೇಳಿದುದುಂಟೆ?

॥ ಮಹಾಸ್ರಗ್ಧರೆ ॥

ಇದೊ ತೇಜಃಪುಂಜಮೆತ್ತಂ ಪಸರಿಪುದಿದೊ ಪಾತಾಳದಿಂ ಮೆಲ್ಲನೈತಂ-
ದಿದೊ ಶೈತ್ಯಂ ಪದ್ಮಗಂಧಾನಿಲವಿದೊ ದೆಸೆಯೆತ್ತೆತ್ತಲುಂ ತೀಡುತಿರ್ಕುಂ ।
ಇದೊ ಧಾತ್ರೀದೇವಿ ಬರ್ಪಳ್ ಜನಪತಿ ನಮಿಸೈ ಲಕ್ಷ್ಮಣಾ ಬೇಡಿಕೊಳ್ಳೈ
ಮುದದಿಂ ಬಾಲರ್ಕಳೀಗಳ್ಕುಸುಮವಿಕಿರದಿಂ ಸ್ತೋತ್ರಮಂ ಗೈವುದಂದಂ ॥ ೨೬ ॥

ಎಲ್ಲರೂ—(ಹಾಗೆಯೇ ಮಾಡುವರು)

(ಬಳಿಕ ಪಾತಾಳವನ್ನು ಭೇದಿಸಿಕೊಂಡು ಹೂಮಳೆಗರೆಯುತ್ತ ತನ್ನಂತೆಯೇ ದಿವ್ಯವೇಷದಿಂದೊಪ್ಪುವ ಗೆಳತಿಯರೊಂದಿಗೆ ಭೂದೇವಿಯು ಪ್ರವೇಶಿಸುವಳು.)

ಎಲ್ಲರೂ—(ಕೈಮುಗಿದುಕೊಂಡು)

ಕಂದ ॥ ತೀವಿದ ಕೃಪೆಯಿಂ ಸೃಷ್ಟಿಯ
ನೋವ ಗುಣಂ ಪಿರಿದೆನುತ್ತೆ ಶೇಷಂ ತಲೆಯಿಂ ।
ದೇವಿಯೆ ನಿನ್ನಂ ಪೊತ್ತಿರೆ
ದೇವರ್ಕಳನಿರದೆ ಪೊರೆದಳೆಮ್ಮಂ ಪೊರೆಯಾ ॥ ೨೭ ॥

ಉನ್ನತಪಯೋಧರಂಗಳ್
ಸನ್ನುತೆ ನಿನಗೊಪ್ಪೆ ವಿಂಧ್ಯಕೈಲಾಸಂಗಳ್ ।
ಬಾನ್ನದಿಯ ಹಾರಮುಮರಿರೆ
ಮುನ್ನೀರೆಂಬತುಳರತ್ನಮೇಖಲೆಯೆಸೆಗುಂ ॥ ೨೮ ॥

ಮುಖಮಂ ನಿರ್ವಹಿಸಲ್ ಶತ
ಮುಖನುತ್ಸಾಹಂಬಡುತ್ತೆ ವರ್ಷಿಸಲೆಂದುಂ ।

ನಿಖಿಲಾಧ್ವರದುಪಕರಣಮು
ನಖಿಲಮುಮಂ ಬೆಳೆದು ಬೆಳಗೆ ವಿಶ್ವಂಭರೆ ನೀಂ ॥ ೨೯ ॥

ಭಗವತಿ ವಸುಂಧರೆ, ವಂದಿಸುವೆವು (ಎಂದೆಲ್ಲರೂ ನಮಸ್ಕರಿಸುವರು)

ಭೂದೇವಿ—(ಸುತ್ತಲೂ ನೋಡಿ) ಆಹಾ! ಲೋಕೋತ್ತರವಾದ ಮಹಿಮೆಯಿಂದೊಪ್ಪುವ ಪತಿವ್ರತೆಯರ ಶಾಸನವು ಮೀರಲಶಕ್ಯವಾದುದು.

॥ ಸ್ರಗ್ಧರೆ ॥

ಸುತ್ತುಂ ಸ್ವರ್ಮರ್ತ್ಯಲೋಕಂಗಳೊಳಿರದೆ ಕರಂ ವ್ಯಾಪ್ತಮಪ್ಪರ್ಕತೇಜ
ಕ್ಕೆತ್ತಂ ಸಂರೋಧಮಕ್ಕುಂ ಗರುಡನ ಗತಿ ಮತ್ತೆಲ್ಲಿ ತಾಂ ಕಷ್ಟಸಾಧ್ಯಂ।
ಮತ್ತಂ ಸಾಮಾನ್ಯಮಪ್ಪಾ ಮುನಿನಿವಹಕಗಮ್ಯಪ್ರದೇಶಂಗಡೆತ್ತಂ
ಪತ್ತಿರ್ದಾ ಸ್ಥಾನದಿಂ ಜಾನಕಿ ಸೆಳೆಯೆ ಬಲಾತ್ಕಾರದಿಂದಿತ್ತವಂದೆಂ ॥೩೦॥

ಆದುದರಿಂದ ಅವಳೊಂದಿಗೆ ಮಾತಾಡುವೆನು. (ಸೀತೆಯ ಕಡೆಗೆ ತಿರುಗಿ) ವತ್ಸೆ, ಮೈಥಿಲಿ, ಯಾರೇನು ಮಾಡಬೇಕು ಎಂದು ಬಯಸುತ್ತಿರುವೆ?

ಸೀತೆ—(ವಿಸ್ಮಯದಿಂದ ನೋಡಿ) ಭಗವತಿ, ನೀನಾರೆಂದು ನಾನು ಹೇಗೆ ತಿಳಿಯಬೇಕು?

ಭೂದೇವಿ—ಏನು! ನನ್ನನ್ನೂ ಅರಿಯೆಯಾ?

ಕಂದ ॥ ಮುನಿಗಳ್ ಶಕ್ತಿಯೆನುತ್ತುಂ
ಮನದಿಷ್ಟದ ತಪದ ಸಿದ್ಧಿಯೆಂದುಂ ಜಗದಾ।
ಜನನಿಯೆನುತ್ತುಂ ತಿಳಿವರ್
ಜನಕಜೆ ನೀನವನಿದೇವಿಯೆಂದರಿಯೆನ್ನಂ ॥ ೩೧ ॥

ವತ್ಸೇ, ಅಷ್ಟುಮಾತ್ರವಲ್ಲದೆ ಇದನ್ನೂ ತಿಳಿದುಕೊ—

ಕಂದ ॥ ಹರಿ ಪಂದಿಯ ರೂಪಿಂದು—
ದ್ಧರಿಸಿದನಂದೆಂದು ಜಗದೆ ಜನಜನಿತಮಿರಲ್।
ಸಿರಿ ಜನಕನಸುತೆ ನೀನು—
ದ್ಧರಿಸಲ್ ನಾನಿಂದು ಬಂದೆನಿಲ್ಲಿಗೆ ಮುದದಿಂ ॥ ೩೨ ॥

ಸೀತೆ—(ಕೈಮುಗಿದುಕೊಂಡು) ಭಗವತಿ, ನಾನು ಪರಿಶುದ್ಧವಾದ ನಡತೆಯವಳೆಂದು ನೀನು ತಿಳಿದಿರುವೆಯಾದರೆ ಅದನ್ನು ದಯಮಾಡಿ ಲೋಕಕ್ಕೆ ತಿಳಿಯಪಡಿಸಬೇಕೆಂದು ಬೇಡಿಕೊಳ್ಳುವೆನು.

ಭೂದೇವಿ—ಹಾಗೆಯೇ ಆಗಲಿ! (ಎಂದು ಸುತ್ತಲೂ ನೋಡಿ)

ಕಂದ ॥ ಸುರರುಂ ಸುರಪಾಲಕರುಂ
ನರರುಂ ಕಿನ್ನರರುಮುಲ್ಲದಾ ದಾನವರುಂ ।
ವರಸಿದ್ಧಯಕ್ಷಗಂಧ–
ರ್ವರುಮೊರ್ಚಣಮುವಧರಿಪ್ಪುದೈ ಮುನಿಜನರುಂ ॥ ೩೩ ॥
ಇನೆಯಂ ದಶರಥರಾಮಂ
ತನಗೆಂದಿರೆ ಸೀತೆ ಮಿಕ್ಕ ಪುರುಷರನೆಂತುಂ ।
ಮನದಿಂದಾದೊಡಮೆಂದುಂ
ನೆನೆದಿಲ್ಲೆಂದರಿವುದವಳ ಧರ್ಮದ ನಿಜಮಂ ॥ ೩೪ ॥

(ಅಂತರಿಕ್ಷದಿಂದ ಪುಷ್ಪವೃಷ್ಟಿಗಳಾಗುವುದರೊಂದಿಗೆ ದೇವದುಂದುಭಿಗಳು ಮೊಳಗುವುವು)

ಎಲ್ಲರೂ—(ಸಂತೋಷದಿಂದ) ಆಹಾ! ಆಶ್ಚರ್ಯವು! ವಸುಂಧರೆಯ ವಾಕ್ಯವನ್ನೇ ಅನುಮೋದಿಸಿ ಸೀತೆಯ ಪಾತಿವ್ರತ್ಯವನ್ನು ಅಂಗೀಕರಿಸಿ ಬಗೆ ಬಗೆಯ ಅದ್ಭುತಗಳು ತಲೆದೋರುತ್ತಿವೆ—

॥ ಮತ್ತೇಭವಿಕ್ರೀಡಿತ ॥

ಸುರಿಯುತ್ತಿರ್ಪುದು ಕಲ್ಪವೃಕ್ಷಸುಮವರ್ಷಂ ವ್ಯೋಮದಿಂದೊಚ್ಚತಂ
ಸುರಲೋಕಾದ್ಭುತದುಂದುಭಿಧ್ವನಿ ದ್ರುತಂ ದಿಕ್ಚಕ್ರಮಂ ತುಂಬುತಂ– ।
ಬರದೊಳ್‌ಶುಭ್ರವಿತಾನಮಂ ಪಿಡಿದು ದೇವೀಸೇವೆಯಂ ಗೆಯ್ಯುತ–
ಚ್ಚರಿಯಪ್ಪಂದದೆ ದೇವವರ್ಗಮಿರಲೀ ಪಾವಿತ್ರ್ಯಮತ್ಯದ್ಭುತಂ ॥ ೩೫ ॥

(ತೆರೆಯುಲ್ಲಿ)

॥ ಮಧುಕರಯಾನಂ ॥

ಮೆರೆವಂ ಸತ್ಯದೆ ದಶರಥಭೂಪಂ
ಮೆರೆವಂ ವಿಕ್ರಮಿದಶರಥರಾಮಂ ।
ಮೆರೆಗುಂ ನಿಷ್ಕಲುಷಿತಮಿನವಂಶಂ
ಮೆರೆವಳ್ಜಾನಕಿ ಸುಗುಣಗಳಿಂದಂ ॥ ೩೬ ॥

ಭೂದೇವಿ—ವೈದೇಹಿಯು ಸದಾಚಾರಸಂಪನ್ನೆಯಷ್ಟೆ?

ಎಲ್ಲರೂ—(ಕೈಜೋಡಿಸಿಕೊಂಡು)

ಕಂದ ॥ ಪರಿಶುದ್ಧಳೆನಿಪ ಸತಿಗಾ–
ವರಿಸಿರ್ಪ ಜನಾಪವಾದಮೆಂಬಂಬುದಮಂ ।
ಸ್ಥಿರೆ ನೀಂ ಸಂಶೋಧಿಸಿದೆಯೊ
ಶರದಂ ಚಂದ್ರಿಕೆಯನೆಂತುಟಂತೆಯೆ ನಲವಿಂ ॥ ೩೭ ॥

(ಎಂದು ಹೇಳುತ್ತ ನಮಸ್ಕರಿಸುವರು) ಈ ದಂಪತಿಗಳು ಮರಳಿ ಒಂದಾಗುವುದರಲ್ಲಿ ಆಶ್ಚರ್ಯವಿಲ್ಲ.

ವಾಲ್ಮೀಕಿ— ಅಯ್ಯಾ, ಕೌಸಲ್ಯಾನಂದನನೇ! ಸಚ್ಚರಿತೆಯಾದ ಸೀತೆಯನ್ನು ಅಂಗೀಕರಿಸಿ ಮನ್ನಿಸು!

ರಾಮ— ಗುರುಗಳ ಅಪ್ಪಣೆಯಂತಾಗಲಿ! (ಎಂದು ಹೇಳಿ ಲಕ್ಷ್ಮಣನನ್ನು ಕುರಿತು) ವತ್ಸ ಲಕ್ಷ್ಮಣ, ಪಾದವಂದನೆಯನ್ನು ನೆರವೇರಿಸು!

ಸೀತೆ—(ಹರ್ಷದಿಂದ ಕೈಜೋಡಿಸಿಕೊಂಡು) ಆರ್ಯಪುತ್ರನಿಗೆ ಜಯವಾಗಲಿ!

ವಾಲ್ಮೀಕಿ— ಆಹಾ! ಪ್ರತಿಗ್ರಹದ ರೀತಿಯು ಲೋಕೋತ್ತರವಾದುದು.

ಲಕ್ಷ್ಮಣ— (ಹರ್ಷಲಜ್ಜೆಗಳೊಂದಿಗೆ) ಆರ್ಯೆ, ವಧ್ಯನೂ ಪಾತಕಿಯೂ ಎನಿಸಿದ ಲಕ್ಷ್ಮಣನು ನಿನಗೆ ಅಭಿವಂದಿಸುವನು. (ಎಂದು ಎರಗುವನು)

ಸೀತೆ— ವತ್ಸ, ನೀನೇಕೆ ನಿನ್ನನ್ನು ಹೀಗೆ ನಿಂದಿಸಿಕೊಳ್ಳುವೆ? ಹೀಗೆಯೇ ಹಿರಿಯರ ಆಜ್ಞೆಯನ್ನು ಪರಿಪಾಲಿಸುತ್ತ ಚಿರಂಜೀವಿಯಾಗು!

ವಾಲ್ಮೀಕಿ— ವತ್ಸ ರಾಮ, ಇದರಿಂದ ನೀನು ಸೀತೆಯನ್ನು ಪರಿಗ್ರಹಿಸಿದಂತಾಯಿತು. ನೀನೇ ಮಾತನಾಡಿಸಿ ಆಕೆಯ ಹಸ್ತವನ್ನು ಹಿಡಿದುಕೊಂಡು ಅವಳನ್ನು ಯಜ್ಞದ ಅಧಿಕಾರದಲ್ಲಿ ನಿಯೋಗಿಸುವವನಾಗು!

ರಾಮ—(ಲಜ್ಜೆಯನ್ನು ಅಭಿನಯಿಸುವನು)

ವಾಲ್ಮೀಕಿ— ನಾಚಿಕೆಯಂತಿರಲಿ! ಅಪೂರ್ವವಾದ ಅಶ್ವಮೇಧಯಾಗವಲ್ಲದಿರುತ್ತಿದ್ದರೆ ದಶರಥಕುಮಾರನ ಸರ್ವಸಾಕ್ಷಿಕವಾದ ಪಾಣಿಗ್ರಹಣವು ಆಶ್ಚರ್ಯಜನಕವಾಗುತ್ತಿದ್ದಿತೆ?

ರಾಮ— ಇದು ಸದಾಚಾರವು; ಮಾತ್ರವಲ್ಲದೆ ಗುರುನಿಯೋಗವೂ ಹೌದು. (ಎಂದು ಸೀತೆಯ ಕೈಯನ್ನು ಹಿಡಿದು) ಮಂಗಳಶೀಲೆ ವೈದೇಹಿ —

ಕಂದ ॥ ಸಂತರ್ ಗೃಹಸ್ಥಧರ್ಮಕೆ
ಸಂತತಿಯಜ್ಞಂಗಳೆಂಬ ಲಾಭಮನುಸುರ್ವರ್ ।
ಇಂತವರೊಳಾದುದಾದಿಮ
ಮೆಂತುಂ ಗೃಹವಾಸದಿಂದೆ ಮುಂತಣದಕ್ಕುಂ ॥ ೩೮ ॥

ಸೀತೆ— ಆರ್ಯಪುತ್ರನ ಅಪ್ಪಣೆಯಂತೆಯೇ ನಡೆದುಕೊಳ್ಳುವೆನು ಈಗ ನನ್ನ ಆತ್ಮವು ಸಮಾಧಾನ ಹೊಂದಿತು. ನನ್ನ ಪ್ರಾಣಗಳು ಮರಳಿ ಬಂದುವು.

ಭೂದೇವಿ—

ಕಂದ ॥ ನೆರವೇರುಗೆ ಯಜ್ಞಂಗಳ್
ಸುರಿಸುಗೆ ಮಘವಂ ಸಕಾಲದಲ್ಲೇ ಮಳೆಯಂ ।
ನೆರೆದಿರ್ಕೆಲ್ಲಾ ಜನರುಂ
ನೆರೆದಿರೆ ದಾಂಪತ್ಯದಿಂದೆ ಸೀತಾರಾಮರ್ ॥ ೩೯ ॥

(ಎಂದು ಅಂತರ್ಧಾನವಾಗುವಳು)

ರಾಮ—ಏನು! ಭೂದೇವಿಯು ಕಣ್ಮರೆಯಾದಳೆ?

ವಾಲ್ಮೀಕಿ—ದೇವತೆಗಳು ಹೆಚ್ಚು ಕಾಲ ಇಲ್ಲಿರತಕ್ಕವರಲ್ಲವಷ್ಟೆ!

ರಾಮ—ನಾನೀಗ ತಮ್ಮ ಅನುಮತಿಪಡೆದು ಲಕ್ಷ್ಮಣನಿಗೆ ರಾಜ್ಯಾಭಿಷೇಕಮಾಡಬೇಕೆಂದು ಬೇಡಿಕೊಳ್ಳುವೆನು.

ಲಕ್ಷ್ಮಣ—(ಬದ್ಧಾಂಜಲಿಯಾಗಿ) ಆರ್ಯನಿಗೆ ಸಂತೋಷವಿರುವುದಾದರೆ ರಾಜ್ಯಾಧಿಕಾರವನ್ನು ಮಕ್ಕಳಲ್ಲಿ ಇರಿಸಿ ಚಿರಕಾಲದಿಂದಲೂ ಅನುಚರನಾದ ಸೌಮಿತ್ರಿಯ ಯುವರಾಜಶಬ್ದವನ್ನು ಹಂಚಿಕೊಡಬೇಕೆಂದು ಬೇಡಿಕೊಳ್ಳುವೆನು.

ವಾಲ್ಮೀಕಿ—ಇಕ್ಷ್ವಾಕುವಂಶಕ್ಕೆ ಯೋಗ್ಯವಾದುದನ್ನೇ ಹೇಳಿರುವನು.

ರಾಮ—ಲಕ್ಷ್ಮಣನ ಕೋರಿಕೆಯನ್ನು ರಾಮನು ಮೀರಲಾರದುದರಿಂದ ಬೇರೆ ಉಪಾಯವಿಲ್ಲ ವತ್ಸನಿಗೆ ಅದೇ ಅವಶ್ಯವೆಂದು ತೋರಿದರೆ ಆ ಕಾರ್ಯವನ್ನು ನಾನೇ ನೆರವೇರಿಸುವೆನು. ಸೌಮಿತ್ರಿ, ಹಾಗಾದರೆ ಅಭಿಷೇಕದ ಉಪಕರಣಗಳನ್ನು ಸಿದ್ಧಪಡಿಸು!

ಲಕ್ಷ್ಮಣ—ದೇವತೆಗಳೇ ಸಂಭ್ರಮದಿಂದ ಸಮಯೋಚಿತವಾಗಿ ಎಲ್ಲವನ್ನೂ ಸಿದ್ಧಪಡಿಸಿರುವರು. ಆರ್ಯನು ನಿರೀಕ್ಷಿಸಬೇಕು—

॥ ಸ್ರಗ್ಧರೆ ॥

ಇಂದ್ರಂ ಶೀತಾಂಶುಗೌರಚ್ಛವಿಯೆನೆ ಮೆರೆವಾ ಛತ್ರಮಂ ಪೊತ್ತುತೋರ್ಪಂ
ಇಂದ್ರಾಣೀಗಂಗೆಯರ್ಚಾಮರಯುಗಲಮನಾಂತಿಲ್ಲಿ ಬೀಸುತ್ತಿರಲ್ಕಿ— ।
ಸ್ತಂದ್ರಪೌರ್ಣರ್ಜಲಂತೀವಿದ ಕನಕದ ಕುಂಭಂಗಳಂ ಪೊತ್ತು ಭೂಪಾ—
ಲೇಂದ್ರಂ ವೀಕ್ಷಿಪ್ಪವೊಲ್ಸೇವಿಪರೆನೆ ವಿಭವೋಪೇತರುಂ ಪ್ರೀತಿಲಭ್ಯರ್
॥ ೪೦ ॥

ರಾಮ—ಹಾಗಾದರೆ ನಮ್ಮಿಬ್ಬರಿಗೂ ಬೆತ್ತಹಿಡಿದಿರುವ ಅಧಿಕಾರ ಮಾತ್ರವೇ!

ಲಕ್ಷ್ಮಣ—ಅನುಗ್ರಹಯುಕ್ತವಾದ ವಿಭಾಗವಿದು.

ರಾಮ—ವತ್ಸ, ದಂಡವನ್ನು ಧರಿಸಿಕೊಂಡಿರು. (ಎಂದು ಹೇಳಿ ವಾಲ್ಮೀಕಿಯೊಡನೆ) ಭಗವನ್, ಮೊಮ್ಮಗನಿಗೆ ಅಭಿಷೇಕಮಾಡೋಣಾಗಲಿ!

ವಾಲ್ಮೀಕಿ—(ಕಲಶವನ್ನು ಹಿಡಿದುಕೊಂಡು ಸಮೀಪಿಸಿ) ಸಾಕೇತನಿವಾಸಿಗಳಾದ ಪುರಪ್ರಮುಖರೇ, ನಾನಾದಿಗಂತನಿವಾಸಿಗಳಾದ ಭೂಪಾಲಕರೇ, ವಿಭೀಷಣ ಸುಗ್ರೀವ ಹನೂಮಂತ ಮೊದಲಾದ ಮಹಾರಥರೇ ನೀವೆಲ್ಲರೂ ಕೇಳಬೇಕು—

ಕಂದ ॥ ಅವಹಿತರಪ್ಪುದು ಭಕ್ತಿಯಿ
ನವನೀನಂದನೆಯ ತನಯನಪ್ರತಿಮರಥಂ ।
ಬುವಿಯೊಳಭಿಷಿಕ್ತನೀ ಕುಶ
ನವನಾಜ್ಞೆಯನಿರದೆ ಶಿರದೊಳಾಂಪುದು ನೀಂಗಳ್ ॥ ೪೧ ॥

ಸುರಲೋಕದಲ್ಲಿ ಸುರಪಂ-
ಗುರಗರ ಪಾತಾಳದಲ್ಲಿ ವಾಸುಕಿಗೆಂತೀ ।
ಧರೆಯಲ್ಲಾ ಮಾಂಧಾತಂ-
ಗರಸಾ ಮಂಗಲಮದಂತೆ ಸಮನಿಕೆ ನಿನಗಂ ॥ ೪೨ ॥

(ಎಂದು ಹೇಳಿ ಅಭಿಷೇಕಮಾಡುವನು)

(ತೆರೆಯಲ್ಲಿ ಕಲಕಲವಾಗುವುದು)

ಮಹಾರಾಜನಿಗೆ ಜಯವಾಗಲಿ! ಜಯವಾಗಲಿ!

ಸೀತೆ—ದೈವಯೋಗದಿಂದ ನನ್ನ ಇಷ್ಟಾರ್ಥವು ನೆರವೇರಿತು.

ರಾಮ—ವತ್ಸ ಲಕ್ಷ್ಮಣಾ, ನಿನ್ನ ಇಷ್ಟಾರ್ಥವು ನೆರವೇರಿತೇ?

ಎಲ್ಲರೂ—(ಸಂತೋಷವನ್ನು ತೋರ್ಪಡಿಸುವರು)

ರಾಮ—(ಕುಶನನ್ನು ಕುರಿತು) ರಾಜನೆ, ನಿನ್ನ ಅನುಜ್ಞೆಯ ಮೇರೆಗೆ ನಾನು ಲವನನ್ನು ಯುವರಾಜ್ಯಾಧಿಕಾರದಲ್ಲಿ ಅಭಿಷೇಕಮಾಡಬೇಕೆಂದಿರುವೆನು.

ಕುಶ—ತಂದೆಯವರ ಅಪ್ಪಣೆಯಂತಾಗಲಿ!

ರಾಮ—(ಒಳ್ಳೆಯದು ಎಂದು ಕಲಶವನ್ನು ತರಿಸಿ ಹಿಡಿದು)

ಕಂದ ॥ ಧರಣಿಪತಿಕುಲಸ ಪ್ರಿಯಸೋ-
ದರಲವನಂ ಯೌವರಾಜ್ಯದೊಳ್ಮುದದಿಂದಂ ।
ಭರಣಾನುಕೂಲಮಪ್ಪಂ-
ತರಸನ ಮಾತಿಂದಲಾನೆಯಭಿಷೇಕಿಪ್ಪೆಂ ॥ ೪೩ ॥

ಎಲ್ಲರೂ — (ಆನಂದವನ್ನು ಅಭಿನಯಿಸುವರು)

ವಾಲ್ಮೀಕಿ — (ರಾಮನನ್ನು ಕುರಿತು) ನಿನಗೆ ಇನ್ನಾವ ಪ್ರಿಯವನ್ನು ಉಂಟು ಮಾಡಲಿ ?

ರಾಮ —

ಕಂದ ॥ ಬಿದಿಯಿಂ ತ್ವದ್ದರ್ಶನದಿಂ-
ತವರಿಂ ಯಾಗಕ್ಕೆ ಧರ್ಮಪತ್ನಿಯೆ ಸಖಿ ಮ- ।
ತ್ತದರಿಂ ಮಕ್ಕಳ್ಗೊಡೆತನ
ಮೊದವಿರೆ ಮತ್ತಾವ ಹಿತಮೊ ಗುರುಗಳೆ ಪೇಳಿಂ ॥ ೪೪ ॥

ವಾಲ್ಮೀಕಿ — ಹಾಗಾದರೆ ಇದೂ ಇರಲಿ !

(ಭರತವಾಕ್ಯವು)

॥ ಮಹಾಸ್ರಗ್ಧರೆ ॥

ನಿರುತಂ ಭೂದೇವರಂತಾ ತ್ರಿಭುವನಗಳುಮಾಪಾವಕಂ ಯಜ್ಞದೇವಂ
ಮರುತಂ ವೇದಂಗಳಂತಂಬುಧಿಗಳುಮನಿಬರ್ತಾಪಸೋತ್ತಂಸರಂತುಂ ।
ಗುರುಪೀಠಾಗ್ರಂಗಳಾ ಪೆರ್ಮೆಯ ಕುಲಪತಿಗಳ್ಭೂಪನಂ ನಲ್ಮೆಯಿಂದಂ
ಪೊರೆಗೆಂದುಂ ಗೋಕುಲಂ ವರ್ಧಿಸುಗನವರತಂ ಮಂಗಳಂ ಭಾವ್ಯಮೆತ್ತಂ
॥ ೪೫ ॥

(ಎಂದೆಲ್ಲರೂ ತೆರಳುವರು)

**ಸಂಪೂರ್ಣಂ**



೪೬ನೇ ಪುಟದ ೨೨ನೇ ಕಂದದ ಉತ್ತರಾರ್ಧವನ್ನು ಹೀಗೆ ತಿದ್ದಿಕೊಳ್ಳುವುದು—
ಬರಿದೇ ಜೊಗಸೆಯ ನೊಡ್ಡುತೆ ।
ಮರುಗುವ ಮೃಗದಂತೆ ಮರುಮರೀಚಿಕೆಗಾಡೆಂ ॥ ೨೨ ॥

# ಇಲ್ಲಿ ಬರುವ ವೃತ್ತಗಳ ಲಕ್ಷಣ

ರಂನರಂಲಗಮಿರಲ್ **ರಥೋದ್ಧತಂ**। ಸಭತಂಲಂಗಮಿರಲ್ಕ**ಶ್ವಹರಂ**।
ನೆಗಳ್ದ **ವಂಶಸ್ಥ**ಮಿರಲ್ ಜತಂಜರಂ। ಜತಂಜಗದ್ವಂದ್ವ **ಮುಪೇಂದ್ರವಜ್ರಂ**।
ತಂತಂಜರಂಗಳ್ ಬರಲಿ**ಂದ್ರವಂಶ**ಮೈ। ನಭಜರಂಗಳಿರೆ **ಮತ್ತಕೋಕಿಲಂ**।
**ದ್ರುತವಿಲಂಬಿತ** ಮೊಪ್ಪೆನಭಂಭರಂ। ನನರಜಗುರುಯುಗ್ಮದಿಂದೆ-
**ಗೋಮತೀ**ದಲ್। ಸಭರಂನಂಬರೆ **ಮಧುಕರಯಾನಂ**।
ನನಮಯಯಗಣಂಗಳ್ **ಮಾಲಿನೀ** ವೃತ್ತಮಕ್ಕುಂ।
ಜರಂಜರಂಜಗಂ ಬರಲ್ ನೆಗಳ್ದ ಪಂಚಚಾಮರಂ।
**ಮಲ್ಲಿಕಾ**ಯುತ **ಮಾಲೆ**ಯಪ್ಪುದು ರಂಸಜಂಜಭರಂಬರಲ್।
**ತರಳ** ವೃತ್ತಮೆನಿಪ್ಪುದೊಪ್ಪಿರೆ ನಂಭರಂಸಸಜಂಗಮುಂ।
ಕಣ್ಗೊಪ್ಪಲ್ ಮಸಜಂಸತಂತಗಮುಮಾ **ಶಾರ್ದೂಲವಿಕ್ರೀಡಿತಂ**
**ಉತ್ಪಲಮಾಲೆ** ಯಪ್ಪುದು ಭರಂನಭಭಂರಲಗಂನೆಗಳ್ದಿರಲ್।
ಸಭರಂನಂಮಯಲಂಗಮುಂ ಬಗೆಗೊಳಲ್ **ಮತ್ತೇಭವಿಕ್ರೀಡಿತಂ**
ನಜಭಜಜಂಜರಂಬಗೆಗೊಳುತ್ತಿರೆ **ಚಂಪಕಮಾಲೆ**ಯೆಂದಪರ್।
ತೋರಲ್ ಮಂರಂಭನಂಮೂಯಣಮುಮದೆತಾಂ **ಸ್ರಗ್ಧರಾ**ವೃತ್ತಮಕ್ಕುಂ।
ಸತತಂನಂಸಂರರಂಗಂ ನೆರಿದೆಸೆಯೆ **ಮಹಾಸ್ರಗ್ಧರಾ**ವೃತ್ತಮಕ್ಕುಂ।
ಭಂರನಭಂಭಭಂರಲಗ ಮೊಪ್ಪೆ**ಮಹೋತ್ಪಲಮಾಲೆ**ಯೆನುತ್ತೆಪೇಳ್ದಪರ್।

**ಉಪಜಾತಿ:**—ಬೇರೆ ಬೇರೆ ವೃತ್ತದ ಪಾದಗಳು ಸೇರಿ ಆಗುವುದನ್ನು ಉಪಜಾತಿಯೆಂದು ಕರೆಯುವುದು ರೂಢಿಯಾಗಿದೆ.

**ಕಂದ ॥** ಇದು ಗಿರಿಶಂ, ಧೂರ್ಜಟಿ, ಶರ್ವಂ, ಪುರಾರಿ, ಮಖರಿಪು ಎಂಬ ಗಣಗಳಿಂದಾಗುವುದು. ಇಂತಹ ನಾಲ್ಕು ಮಾತ್ರೆಯ ಗಣಗಳು ಒಂದು ಮೂರನೆಯ ಪಾದಗಳಲ್ಲಿ ಮೂರು ಮೂರೂ, ಎರಡು ನಾಲ್ಕನೆಯ ಪಾದಗಳಲ್ಲಿ ಐದೈದೂ ಇರಬೇಕು. ಪೂರ್ವೋತ್ತರಾರ್ಧಗಳ ವಿಷಮ ಸ್ಥಾನಗಳಲ್ಲಿ "ಪುರಾರಿ" ಗಣವಿರಕೂಡದು. ಆರನೆಯ ಸ್ಥಾನಗಳಲ್ಲಿ "ಪುರಾರಿ" ಇಲ್ಲವೆ "ಮಖರಿಪು" ಗಣವಿದ್ದು ಮೊದಲ ಹ್ರಸ್ವದ ಮುಂದೆ ಯತಿಯಿರಬೇಕು. ಎಂಟನೆಯ ಸ್ಥಾನಗಳಲ್ಲಿ ಅಂತ್ಯಗುರುವುಳ್ಳ ಗಣಗಳೇ ಇರಬೇಕು. ಸಂಸ್ಕೃತದಲ್ಲಿಯ 'ಆರ್ಯಾ' ಎಂಬ ವೃತ್ತಭೇದವೆನಿಸಿದ ಕಂದವು ಕನ್ನಡ ಸಾಹಿತ್ಯದಲ್ಲಿ ವಿಶೇಷ ಪ್ರಚಾರದಲ್ಲಿದೆ.

ಪ್ರಕಾಶಕರು:
ಎಂ. ಸುಬ್ರಾಯ ಭಟ್ಟ
ಬೇಳ ಪೋಸ್ಟು
ಕಾಸರಗೋಡು ತಾಲ್ಲೂಕು.
(ದ. ಕನ್ನಡ)

## ಈ ಲೇಖಕರ ಇತರ ಗ್ರಂಥಗಳು

**ನಾಟಕಗಳು:**

ಉತ್ತರ ರಾಮ ಚರಿತ್ರಂ

ಭಾಸನ ಮೂರು ಏಕಾಂಕಗಳು

**ಗದ್ಯ:**

ಪಾಶುಪತ

ಭೀಷ್ಮ

ಸಮುದ್ರಮಥನ

**ಕವನಗಳು:**

ಉದ್ಯಾನ

ಕರ್ಣಾಮೃತ

ಮಾರಾಟಗಾರರು

ಜ್ಞಾನ ಪ್ರಪಂಚ-ಮಂಗಳೂರು.

ಮುದ್ರಕರು:
ವಿಜಯ ಪ್ರಿಂಟರ್ಸ್ ಎಂಡ್
ಪಬ್ಲಿಷರ್ಸ್ ಲಿಮಿಟೆಡ್,
ಮಂಗಳೂರು-1.